# ತೈತ್ತಿರೀಯೋಪನಿಷದ್ರಹಸ್ಯ








ಎಡತೊರೆ ಸುಬ್ರಾಯ ಶರ್ಮ.

|| ಓಂ ||

# ತೈತ್ತಿರೀಯೋಪನಿಷದ್ರಹಸ್ಯ

ಯಡತೊರೆ ಸುಬ್ಬ್ರಾಯಶರ್ಮ

ಪ್ರಥಮ ಮುದ್ರಣ

ಶ್ರೀ ವಿಶ್ವಾವಸು ಸಂವತ್ಸರದ ಚೈತ್ರಶುದ್ಧ ನವಮಿ

ಶ್ರೀ ರಾಮನವಮಿ ಶನಿವಾರ, ತಾರೀಖು ೧೦-೪-೧೯೬೫.



ಗ್ರಂಥವು ದೊರೆಯುವ ಸ್ಥಳ

**ಶ್ರೀಯುತ|| ಎಲ್. ನಾರಾಯಣ ಜೋಯಿಸರು**

ರಿಟೈರ್ಡ್ ಎಗ್ಸಿಕ್ಯೂಟಿವ್ ಇಂಜನಿಯರು, ಗಾಂಧೀನಗರ,

ತುಮಕೂರು.

**ಶ್ರೀಯುತ|| ಜಿ. ಶ್ರೀನಿವಾಸಮೂರ್ತಿಗಳು**

ಶ್ರೀ ವೆಂಕಟರಾಯಪ್ಪ ಕಲ್ಯಾಣ ಮಂದಿರ

೩ನೇ ಕ್ರಾಸು, ಮಲ್ಲೇಶ್ವರ, ಬೆಂಗಳೂರು-೩.

ಬೆಂಗಳೂರು ಸಿಟಿ ಬಳೇಪೇಟೆಯಲ್ಲಿರುವ ಜ್ಯುಪಿಟರ್ ಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿತು.

|| ಓಂ ||

**ಓಂಕಾರಂ ಬಿಂದು ಸಂಯುಕ್ತಂ ನಿತ್ಯಂ ಧ್ಯಾಯನ್ತಿಯೋಗಿನಃ ।**
**ಕಾಮದಂ ಮೋಕ್ಷದಂ ತಸ್ಮಾದೋಂಕಾರಾಯ ನಮೋನಮಃ ॥**

# ತೈತ್ತಿರೀಯೋಪನಿಷದ್ರಹಸ್ಯ

## ಪೀಠಿಕೆ

ತೈತ್ತಿರೀಯೋಪನಿಷತ್ತಿನಲ್ಲಿ **"ಶಿಕ್ಷಾವಲ್ಲಿ", "ಆನಂದವಲ್ಲಿ" "ಭೃಗುವಲ್ಲಿ", "ನಾರಾಯಣಪನ್ನ"** ಎಂಬ ನಾಲಕ್ಕು ಭಾಗಗಳಿರುವುವು. ವೇದಗಳಲ್ಲಿರುವ ತತ್ವಗಳನ್ನು "ಅಥಾತೋ ಧರ್ಮ ಜಿಜ್ಞಾಸಾ", "ಅಥಾತೋ ಬ್ರಹ್ಮಜಿಜ್ಞಾಸಾ" ಎಂದರೆ ಕರ್ಮಕಾಂಡ ಜ್ಞಾನಕಾಂಡ ಎಂಬ ಎರಡು ಭಾಗಗಳಾಗಿ ವಿಂಗಡಿಸಿದೆ. ಈ ಉಪನಿಷತ್ತಿನಲ್ಲಿರುವ ಆನಂದವಲ್ಲಿ ಮತ್ತು ಭೃಗುವಲ್ಲಿಯಲ್ಲಿ ಜ್ಞಾನಕಾಂಡದ ತತ್ವಗಳು ಮಾತ್ರ ಇರುವುವು. ನಾರಾಯಣಪನ್ನದಲ್ಲಿ ಕರ್ಮ ಜ್ಞಾನಗಳೆರಡರ ತತ್ವಗಳೂ ಇವೆ. ಶಿಕ್ಷಾವಲ್ಲಿಯಲ್ಲಾದರೋ ಕರ್ಮ ಜ್ಞಾನಕಾಂಡಗಳೆರಡರ ತತ್ವಗಳೂ ಇರುವುವಲ್ಲದೆ ವೇದಾಧ್ಯಯನ ಪ್ರಾರಂಭದಿಂದ ಓಂಕಾರಸ್ವರೂಪವಾದ ಪರಬ್ರಹ್ಮಸಾಕ್ಷಾತ್ಕಾರದವರಿಗೂ ಇರುವ **ನಾದಬ್ರಹ್ಮದ ಮಹಿಮೆಯನ್ನು** ಪ್ರತಿಪಾದಿಸುವ ತತ್ವಗಳೂ, **"ಶಿಕ್ಷಾವಲ್ಲಿ"** ಎಂಬ ನಾಮಾಂಕಿತಕ್ಕೆ ಸಾರ್ಥಕವಾಗುವಂತೆ ಶಿಷ್ಯನು ಗುರುಕುಲವಾಸದಲ್ಲಿ ವೇದಾಧ್ಯಯನ ಪ್ರಾರಂಭದಿಂದ ಪರಮಾತ್ಮಸಾಕ್ಷಾತ್ಕಾರದವರಿಗೂ ಗುರುವಿನಿಂದ ಶಿಕ್ಷಿತನಾಗುವ ತತ್ವಗಳೂ ಅಡಗಿವೆ. ಅಲ್ಲದೆ ಜ್ಞಾನಕ್ಕೆ ಸಾಧನೆಯಾದ ಕರ್ಮದ ವಿಚಾರ ಮತ್ತು ಯೋಗದ ವಿಚಾರಗಳೂ ಅಡಗಿವೆ. ಆದುದರಿಂದ ಎಲ್ಲಾ ವಿಚಾರಗಳನ್ನೂ ಒಳಗೊಂಡಿರುವ ಶಿಕ್ಷಾವಲ್ಲಿಯ ಎಲ್ಲಾ ಮಂತ್ರಗಳನ್ನೂ ಬರೆದು ತತ್ವಗಳನ್ನು ವಿವರಿಸುವುದೇ ಈ ಗ್ರಂಥ ಕರ್ತನ ಧ್ಯೇಯವಾಗಿದೆ.

ಶಿಕ್ಷಾವಲ್ಲಿಯಲ್ಲಿ ಗೋಪ್ಯವಾಗಿ ಅಡಗಿರುವ ಗಹನವಾದ ಜ್ಞಾನಮಾರ್ಗದ ತತ್ವಗಳನ್ನು ಹೊರಸೂಸಿ ಬರೆದಿರುವುದರಲ್ಲಿ ಆನಂದವಲ್ಲಿ ಮತ್ತು ಭೃಗುವಲ್ಲಿಯಲ್ಲಿರುವ ಜ್ಞಾನಮಾರ್ಗಕ್ಕೆ ಅನ್ವಯಿಸುವ ಮಂತ್ರಗಳೊಡನೆ ತತ್ವಗಳನ್ನು ವಿವರಿಸಿದೆ. ಮೇಲಿನ ವಿಚಾರಗಳನ್ನು ತಿಳಿಸುವ ಉದ್ದೇಶವೇ ಈ ಗ್ರಂಥದ ಬರವಣಿಗೆಯಾಗಿರುವುದು. ಬರೆದಿರುವ ತತ್ವಗಳೆಲ್ಲಾ ಶ್ರೀ ಶಂಕರಭಗವತ್ಪಾದಾಚಾರ್ಯರವರ ಭಾಷ್ಯಕ್ಕೆ ಅನುಸಾರವಾಗಿಯೇ ಇರುವುದು. ವಿಚಾರಗಳನ್ನು ೧೪ ಪ್ರಕರಣಗಳಾಗಿ ವಿಂಗಡಿಸಿದೆ. ಅಲ್ಲದೆ

ಪ್ರತಿಯೊಂದು ಪ್ರಕರಣದ ಪ್ರಥಮದಲ್ಲಿ ಆಯಾಯಾ ಪ್ರಕರಣದಲ್ಲಿ ಯಾವ ಯಾವ ತತ್ವವಿಷಯಗಳಿರುವುವೊ ಅವುಗಳನ್ನು ಸಂಕ್ಷೇಪವಾಗಿ ತಿಳಿಸಿದೆ.

ಈ ಗ್ರಂಥವನ್ನು ಮುದ್ರಿಸಲು ಶ್ರೀಮತ್ಪರಮಹಂಸ ಇತ್ಯಾದಿ ಬಿರುದಾಂಕಿತರಾದ ಶ್ರೀ ಶೃಂಗೇರಿ ಜಗದ್ಗುರು ಶ್ರೀಮದಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರು ಶ್ರೀ ಶಾರದಾ ಚಂದ್ರಮೌಳೀಶ್ವರರ ಪ್ರಸಾದದೊಡನೆ ಅನುಗ್ರಹಿಸಿರುವರು. ನನ್ನ ಎಂಭತ್ತಮೂರನೆ ವಯಸ್ಸಿನ ವೃದ್ಧಾಪ್ಯತೆಯ ನಿರ್ಬಲದಿಂದ ನಾನು ಬರೆದ ಈ ಗ್ರಂಥವನ್ನು ಮುದ್ರಣ ಮಾಡಿಸಲು ಸಾಧ್ಯವಿರಲಿಲ್ಲ ನನಗೆ ಆಪ್ತರಾದ ರಿಟೈರ್ಡ್ ಎಗ್ಜಿಕ್ಯೂಟೀವ್ ಇಂಜಿನಿಯರು ಶ್ರೀಯುತ|| ಎಲ್. ನಾರಾಯಣ ಜೋಯಿಸರು ಈ ಗ್ರಂಥವನ್ನು ಮುದ್ರಣಮಾಡಿಸುವುದಕ್ಕೆ ಮುಖ್ಯಕಾರಣರಾಗಿ ತನುಮನಧನಗಳಿಂದ ಬಹು ಶ್ರಮವಹಿಸಿ ಈ ಕಾರ್ಯವನ್ನು ಪ್ರಾರಂಭಿಸಿ ಪೂರ್ಣಮಾಡಿದರು. ಶ್ರೀಯುತ|| ಎಲ್. ನಾರಾಯಣ ಜೋಯಿಸರಿಗೂ, ಈ ಗ್ರಂಥದಲ್ಲಿರುವ ಓಂಕಾರದ ವರ್ಣಚಿತ್ರವನ್ನು ಮುದ್ದಾಗಿ ಬರೆದು ಮುದ್ರಿಸಲು ಸಹಾಯಕರಾದ ಚಿ|| ರಾ|| ಬಿ. ವೈಲಾರಯ್ಯನಿಗೂ, ಮುದ್ರಣದ ತಪ್ಪುಗಳನ್ನು ತಿದ್ದಿ ಸಹಾಯಮಾಡಿದ ಶ್ರೀಯುತ|| ಸಿ. ಆರ್. ಅನಂತರಾಯರಿಗೂ ಮತ್ತು ಈ ಗ್ರಂಥದ ಮುದ್ರಣಕ್ಕೆ ಧನಸಹಾಯಮಾಡಿದ ಮಹನೀಯರುಗಳಿಗೂ ಪರಮಶ್ರೇಯಸ್ಸನ್ನು ಅನುಗ್ರಹಿಸೆಂದು ಓಂಕಾರಸ್ವರೂಪಿಯಾದ ಈಶ್ವರನನ್ನು ಪ್ರಾರ್ಥಿಸುತ್ತೇನೆ.

ನಂ, 30, ಸಂಪಿಗೆ ರಸ್ತೆ
ಮಲ್ಲೇಶ್ವರ,
ಬೆಂಗಳೂರು–3.

ಯಡತೊರೆ ಸುಬ್ರಾಯಶರ್ಮ

|| ಓಂ ||

# ವಿಷಯಾನುಕ್ರಮಣಿಕೆ

ಪುಟಸಂಖ್ಯೆ

" ಓಮಿತೀದಗ್ಂ ಸರ್ವಮ್ "

ಚಿತ್ರದಲ್ಲಿರುವ ಸಕಲ ತತ್ವಗಳೂ ಓಂಕಾರವೆ.




ಮನುಷ್ಯನು ಓಂಕಾರ ಸಾಕ್ಷಾತ್ಕಾರವನ್ನು ಅನುಭವಿಸಿ ಧನ್ಯನಾಗಬಹುದು.

|| ಓಂ ||

ಶ್ರೀ ಗಣೇಶ ಶಾರದಾ ಗುರುಭ್ಯೋ ನಮಃ

# ತೈತ್ತಿರೀಯೋಪನಿಷದ್ರಹಸ್ಯ

## ಶಿ ಕ್ಷಾ ವ ಲ್ಲಿ

### ಶಾಂತಿಪಾಠ

|| ಓಂ ||

**ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ ।**
**ಶಂ ನ ಇನ್ದ್ರೋ ಬೃಹಸ್ಪತಿಃ । ಶಂ ನೋ ವಿಷ್ಣು ರುರುಕ್ರಮಃ ।**
**ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ**
**ಬ್ರಹ್ಮಾಸಿ । ತ್ವಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ ।**
**ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ । ತನ್ಮಾಮವತು ।**
**ತದ್ವಕ್ತಾರಮವತು । ಅವತು ಮಾಮ್ । ಅವತು ವಕ್ತಾರಮ್ ।**

**ಓಂ ಶಾನ್ತಿಃ ಶಾನ್ತಿಃ ಶಾನ್ತಿಃ**

**ತಾತ್ಪರ್ಯ :—**ಪ್ರಾಣವೃತ್ತಿಗೂ ಹಗಲಿಗೂ ಅಭಿಮಾನಿದೇವತೆಯಾದ **ಮಿತ್ರನು** ನಮಗೆ ಸುಖವನ್ನುಂಟುಮಾಡಲಿ. ಹಾಗೆಯೇ ಅಪಾನವೃತ್ತಿಗೂ ರಾತ್ರಿಗೂ ಅಭಿಮಾನಿದೇವತೆಯಾದ **ವರುಣನು** ನಮಗೆ ಸುಖದಾಯಕನಾಗಲಿ. ಚಕ್ಷುರಿಂದ್ರಯಕ್ಕೂ ಸೂರ್ಯನಿಗೂ ಅಭಿಮಾನಿಯಾದ **ಅರ್ಯಮನು** ನಮಗೆ ಸುಖಕಾರಕನಾಗಲಿ. ಬಲಕ್ಕೆ ಅಭಿಮಾನಿಯಾದ **ಇಂದ್ರನೂ** ವಾಕ್ಕಿಗೂ ಬುದ್ಧಿಗೂ ಅಭಿಮಾನಿಯಾದ **ಬೃಹಸ್ಪತಿಯೂ** ನಮಗೆ ಸುಖದಾಯಕರಾಗಲಿ. ಉರುಕ್ರಮನಾದ ಅಂದರೆ ಚಲನ ಕ್ರಿಯಾಸಮರ್ಥನಾದ (ವಿಸ್ತೀರ್ಣವಾಗಿ ಹೆಜ್ಜೆಯಿಡುವ) ಪಾದಗಳಿಗೆ ಅಭಿಮಾನಿಯಾದ **ವಿಷ್ಣುವು** ನಮಗೆ ಸುಖವನ್ನುಂಟುಮಾಡಲಿ.

ಬ್ರಹ್ಮಕ್ಕೆ ನಮಸ್ಕಾರ. ಎಲೈ ವಾಯುವೇ ನಿನಗೆ ನಮಸ್ಕಾರ. ನೀನೇ ಪ್ರತ್ಯಕ್ಷ ವಾದ ಬ್ರಹ್ಮವಾಗಿರುತ್ತೀಯೇ. ನಿನ್ನನ್ನೇ ಪ್ರತ್ಯಕ್ಷವಾದ ಬ್ರಹ್ಮನೆಂದು ಹೇಳುತ್ತೇನೆ. ಶಾಸ್ತ್ರೋಕ್ತವಾದದ್ದೂ ಬುದ್ಧಿಯಿಂದ ನಿರ್ಣಯಿಸಲ್ಪತಡಕ್ಕದ್ದೂ ಆದ ಋತವನ್ನೇ ಹೇಳುತ್ತೇನೆ. ವಾಕ್ಕಾಯಗಳಿಂದಲೂ ಆಚರಿಸಬೇಕಾದ **ಸತ್ಯವನ್ನೇ** ಹೇಳುತ್ತೇನೆ. **ಋತ** ಮತ್ತು **ಸತ್ಯ** ಎಂಬಿವೆರಡೂ ನಿನ್ನ ಅಧೀನರಾಗಿಯೇ ಇರುವುದರಿಂದ ನಿನ್ನನ್ನೇ ಋತವೆಂದೂ ಸತ್ಯವೆಂದೂ ಕರೆಯುವೆನು. ಈ ರೀತಿ ವಾಯುಸ್ವರೂಪಿಯಾಗಿಯೂ ಋತ ಮತ್ತು ಸತ್ಯಸ್ವರೂಪಿಯಾಗಿಯೂ ಇರುವ ಬ್ರಹ್ಮವು ನನ್ನನ್ನು ಕಾಪಾಡಲಿ. ಅದು ಆ ಬ್ರಹ್ಮವನ್ನು ಬೋಧಿಸುವ ಆಚಾರ್ಯನನ್ನು ಕಾಪಾಡಲಿ. ನನ್ನನ್ನು ಕಾಪಾಡಲಿ. ಆಚಾರ್ಯನನ್ನು ಕಾಪಾಡಲಿ.

ಆಧ್ಯಾತ್ಮಿಕ–ಆಧಿಭೌತಿಕ–ಆಧಿದೈವಿಕ
ಅಡ್ಡಿಗಳೆಲ್ಲಾ ನಶಿಸಿ ನಮಗೆ ಶಾಂತಿಯುಂಟಾಗಲಿ !

---

# ೧ ನೆಯ ಪ್ರಕರಣ

## ೧. ಶಿಕ್ಷೆ ಎಂಬ ಪದದ ವಿವರಣೆ

ಈ ಪ್ರಕರಣದಲ್ಲಿರುವ ವಿಷಯಗಳು :—[ಶಿಕ್ಷೆ ಎಂಬ ಪದದ ಅರ್ಥವು ಗುರುಕುಲವಾಸದಲ್ಲಿ ವೇದಾಧ್ಯಯನ ಪ್ರಾರಂಭದಿಂದ ಪರಮಾತ್ಮಸಾಕ್ಷಾತ್ಕಾರವನ್ನು ಹೊಂದುವವರಿಗೂ ಕರ್ಮ, ಜ್ಞಾನ, ಪ್ರಪಂಚದ ನಡೆವಳಿಕೆಗಳ ವಿಚಾರಗಳಿಗೆಲ್ಲಾ ಅನ್ವಯಿಸುವುದೆಂಬ ವಿವರಣೆ. ವರ್ಣ, ಸ್ವರ, ಮಾತ್ರೆ, ಬಲ, ಸಾಮ, ಸಂತಾನಗಳ ವಿವರಣೆಗಳಿವೆ.]

ಶೀಕ್ಷೆ ಎಂಬ ಪದವು ವೇದಭಾಷೆಯೆಂದೂ ಶೀಕ್ಷೆ, ಶಿಕ್ಷೆ ಎಂಬ ಎರಡು ಪದಗಳೂ ಒಂದೇ ಅರ್ಥದ್ದೆಂದೂ ಶ್ರೀ ಶಂಕರಭಗವತ್ಪಾದಾಚಾರ್ಯರವರು ಭಾಷ್ಯದಲ್ಲಿ ಹೇಳಿರುವರು. ಶಿಕ್ಷೆಯೆಂದರೆ ದಂಡಿಸು ಎಂದು ಅರ್ಥ. ಯಾರನ್ನು ಏತಕ್ಕೆ ದಂಡಿಸಬೇಕು ಎಂಬ ಪ್ರಶ್ನೆಯು ಸ್ವಾಭಾವಿಕವಾಗಿ ತಲೆದೋರುವುದು. ಅವಿದ್ಯೆಯನ್ನು ದಂಡಿಸಬೇಕು. ಕಾರಣವೇನೆಂದರೆ—ಈ ಅವಿದ್ಯೆಯು ಜೀವನನ್ನು ಜನನ ಮರಣ ರೋಗ ದುಃಖಗಳಿಂದ ಕಟ್ಟಿಹಾಕಿಕೊಂಡು ಪ್ರಪಂಚಾನುವರ್ತಿಯಾಗಿ ನಡೆಸುತ್ತಿದೆ. ಆದುದರಿಂದ ಅವಿದ್ಯೆಯಿಂದ ಬಿಡುಗಡೆಯಾಗುವವರಿಗೆ ಅದನ್ನು ದಂಡಿಸಬೇಕು. ಅವಿದ್ಯೆ

ಯನ್ನು ದಂಡಿಸಲು ವಿದ್ಯಾಮಾರ್ಗಾವಲಂಬಿಗಳಾಗಬೇಕು. ಅಂದರೆ ವಿದ್ಯಾರೂಪ ವಾದ ಸತ್ವಗುಣದ ಮಾರ್ಗವನ್ನು ಅವಲಂಬಿಸಿಕೊಂಡು ಅವಿದ್ಯಾಸ್ವರೂಪವಾದ ರಜಸ್ತಮೋಗುಣಗಳಿಂದ ಬಿಡುಗಡೆಯಾಗುವವರಿಗೆ ಅವುಗಳನ್ನು ದಂಡಿಸುವ ಕಾರ್ಯ ಮಾಡಬೇಕು. ಮೋಕ್ಷ ಶಬ್ದಕ್ಕೆ ಬಿಡುಗಡೆ ಎಂದು ಅರ್ಥ. ಅವಿದ್ಯಾಬಂಧನದಿಂದ ಬಿಡಿಸಿಕೊಳ್ಳುವುದೇ ಮೋಕ್ಷ.

ಮನುಷ್ಯನು ಅವಿದ್ಯೆಯನ್ನು ಯಾವ ಸ್ಥಳದಲ್ಲಿ ದಂಡಿಸಬೇಕೆಂದರೆ ; ಕಾಯ, ವಾಕ್ಕು, ಮನಸ್ಸುಗಳಲ್ಲಿ ಮೋಕ್ಷವನ್ನು ಪಡೆಯುವವರಿಗೆ ಅವಿದ್ಯೆಯಾದ ರಜಸ್ತಮೋ ಗುಣಗಳನ್ನು ದಂಡಿಸುತ್ತಾ ಸತ್ವಗುಣವನ್ನು ಅಭಿವೃದ್ಧಿಮಾಡಿಕೊಳ್ಳುತ್ತಿರಬೇಕು. ಮೋಕ್ಷದ ದಾರಿಗೆ ಸಲಕರಣೆಯಾಗಿ ಅಸ್ತಿಭಾರದಂತೆ ಇರುವುದು ಪ್ರಪಂಚ ವ್ಯವಹಾರ ದಲ್ಲಿ ಧರ್ಮಮಾರ್ಗ. ಪ್ರಪಂಚ ವ್ಯವಹಾರದಲ್ಲಿ ರಜಸ್ತಮೋಗುಣಸ್ವರೂಪವಾದ ಅಧರ್ಮಮಾರ್ಗವನ್ನು ದಂಡಿಸಿ, ಸತ್ವಗುಣಸ್ವರೂಪವಾದ ಧರ್ಮಮಾರ್ಗಾವಲಂಬಿ ಗಳಾಗಿರಬೇಕು. ರಜಸ್ತಮೋಗುಣಗಳಿಂದುಂಟಾಗುವ ನಾಸ್ತಿಕ್ಯವನ್ನು ದಂಡಿಸಲು ಈಶ್ವರಾನುಗ್ರಹಪಡೆಯಲು, ಈಶ್ವರಾರಾಧನಾರೂಪವಾದ ಕರ್ಮಗಳನ್ನು ಮಾಡಲು ವೇದಾಧ್ಯಯನ ಶಿಕ್ಷಣವನ್ನು ಪಡೆಯಬೇಕು.

ಅವಿದ್ಯಾಬಂಧನವನ್ನು ಬಿಡಿಸಿಕೊಂಡು ಪರಮಾತ್ಮಸ್ಥಿತಿಯನ್ನು ಹೊಂದಲು ಪಾರಮಾರ್ಥಿಕಕ್ಕೆ ಬೇಕಾದ ಸಾಧನರೂಪವಾದ ವೇದಾಂತ ಶ್ರವಣ, ಮನನ, ನಿದಿ ಧ್ಯಾಸ, ಸಮಾಧಿ ಅನುಷ್ಠಾನಗಳ ಶಿಕ್ಷಣಗಳನ್ನೂ ಅಷ್ಟಾಂಗ ಯೋಗದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಅನುಷ್ಠಾನಗಳ ಶಿಕ್ಷಣಗಳನ್ನೂ ಸಾಧನ ಚತುಷ್ಟಯಗಳಾದ ನಿತ್ಯಾನಿತ್ಯವಸ್ತು ವಿವೇಕ ಇಹಾಮುತ್ರ ಫಲಭೋಗವಿರಾಗ ಶಮಾದಿಷಟ್ಕಸಂಪತ್ತಿ ಮುಮುಕ್ಷತೆ ಇವುಗಳ ಶಿಕ್ಷಣ ಗಳನ್ನೂ ಪಡೆಯಬೇಕು.

ಮೇಲಿನ ಸಾಧನಗಳ ನಿಯಮಗಳಿಗೆ ವ್ಯತಿರಿಕ್ತವಾದವುಗಳನ್ನು ತಪ್ಪಿಸಿ ಸರಿ ಯಾದ ಮಾರ್ಗದಲ್ಲಿಡುವಿಕೆಯೂ ಶಿಕ್ಷಣವೆನಿಸಿಕೊಳ್ಳುವುದು. ಈ ಮೇಲಿನ ಶಿಕ್ಷೆಗಳು ಕಾಯಿಕ-ವಾಚಿಕ-ಮಾನಸಿಕ ಈ ಮೂರಕ್ಕೂ ಸಂಬಂಧಪಟ್ಟೇ ಇರುವುವು. ಪ್ರಪಂಚ ವ್ಯವಹಾರದಲ್ಲಿ ಮಾತಾಪಿತೃಗಳಿಂದ ಕೊಂಚಮಟ್ಟಿಗೆ ಶಿಕ್ಷಿತರಾದರೂ ಧರ್ಮ ಕರ್ಮ ಮತ್ತು ಮೋಕ್ಷ ಮಾರ್ಗಗಳ ಶಿಕ್ಷಣವನ್ನು ಕೊಡುವುದು ಗುರುಗಳಿಗೇ ಸೇರಿದ್ದಾಗಿದೆ. ಮೇಲಿನ ಎಲ್ಲಾ ಶಿಕ್ಷಣಗಳ ತತ್ವಗಳು ತೈತ್ತಿರೀಯೋಪನಿಷತ್ ಶಿಕ್ಷಾವಲ್ಲಿ ಯಲ್ಲಡಗಿವೆ.

**ಓಂ ಶೀಕ್ಷಾಂ ವ್ಯಾಖ್ಯಾಸ್ಯಾಮಃ । ವರ್ಣಸ್ಸ್ವರಃ ।**
**ಮಾತ್ರಾ ಬಲಮ್ । ಸಾಮ ಸಂತಾನಃ ।**
**ಇತ್ಯುಕ್ತಃ ಶೀಕ್ಷಾಧ್ಯಾಯಃ ।**

ಮೇಲಿನ ಉಪನಿಷನ್ಮಂತ್ರದಲ್ಲಿ ಹೇಳಿರುವಂತೆ ವೇದಾಧ್ಯಯನಮಾಡಲು ಅಕಾರಾದಿ ಅಕ್ಷರಗಳು, ಉದಾತ್ತ ಅನುದಾತ್ತ ಸ್ವರಿತ ಪ್ರಚಯಗಳಾದ ಸ್ವರಗಳು, ಹ್ರಸ್ವವೇ ಮುಂತಾದ ಮಾತ್ರೆಗಳು, ಉಚ್ಚಾರಣೆ ಮಾಡುವ ಬಲವು, ಎಡಬಿಡದೆ ಉಚ್ಚರಿಸಿಕೊಂಡು ಹೋಗುವ ಸಂಹಿತಾರೂಪವು ಇರಬೇಕು. ವೇದಮಂತ್ರಗಳ ಉಚ್ಚಾರಣೆಯು ಶಾಸ್ತ್ರಕ್ಕೆ ಅನುಸಾರವಾಗಿ ಗುರುವು ಶಿಷ್ಯನಿಗೆ ಅಧ್ಯಯನ ಮಾಡಿಸುತ್ತಾನೆ. ಅಂದರೆ ತಾನು ಉಚ್ಚರಿಸಿ ತನ್ನ ವಾಕ್ಕಿನ ಶಬ್ದವನ್ನು ಶಿಷ್ಯನ ಶ್ರೋತ್ರಕ್ಕೆ ಬಿಡುತ್ತಾನೆ. ಶಿಷ್ಯನು ಆ ಶಬ್ದವನ್ನು ಗ್ರಹಿಸಿ ಗುರುವು ಯಾವರೀತಿ ಉಚ್ಚರಿಸಿದನೊ ಅದರಂತೆಯೇ ತಾನೂ ಉಚ್ಚರಿಸುತ್ತಾ ಕಂಠಪಾಠವಾಗುವವರಿಗೂ ಕಲಿಯುತ್ತಾನೆ.

ವೇದಾಧ್ಯಯನದಲ್ಲಿ ಉದಾತ್ತಾದಿ ಸ್ವರಗಳೊಡಗೂಡಿದ ಅಕ್ಷರಗಳಿರುವುವು. ವೇದಾರ್ಥವಿಚಾರ ಬೋಧನೆಮಾಡುವ ಕಾಲದಲ್ಲೂ, ಮನುಷ್ಯರು ಮಾತನಾಡುವ ಕಾಲದಲ್ಲೂ, ಉದಾತ್ತಾದಿ ಸ್ವರಗಳೊಡಗೂಡದೆ ಅಕ್ಷರಗಳು ವಚನರೂಪವಾಗಿ ಪ್ರವಹಿಸುತ್ತವೆ. ಮುಖ್ಯವಾಗಿ ಸ್ವರಗಳೊಡಗೂಡಿದ ವೇದಾಧ್ಯಯನವೂ ಸ್ವರಗಳೊಡಗೂಡದೆ ವಚನರೂಪದ ಉಪದೇಶವೂ, ಮಾತನಾಡುವಿಕೆಯೂ ಶಬ್ದಬ್ರಹ್ಮದ ಮೂಲಕವೇ ನಡೆಯುವುವು. ಇದು ಶಬ್ದಬ್ರಹ್ಮದ ಮಹತ್ತನ್ನೇ ಪ್ರತಿಪಾದಿಸುವುದು. ಉಪದೇಶದಿಂದ ಪ್ರಾರಂಭವಾದ ಈ ಶಬ್ದಬ್ರಹ್ಮದ ಮಹತ್ತು ಓಂಕಾರ ಸಾಕ್ಷಾತ್ಕಾರವನ್ನು ತಿಳಿಸುವ ಶಿಕ್ಷಾವಲ್ಲಿಯ ಕೊನೆಯವರೆಗೂ ಇರುವುದು. ಅಂದರೆ ಶಿಕ್ಷಾವಲ್ಲಿಯೆಲ್ಲಾ ಶಬ್ದಬ್ರಹ್ಮದ ಮಹತ್ತನ್ನೇ ಪ್ರತಿಪಾದಿಸುವುದು.

# ೨ ನೆಯ ಪ್ರಕರಣ

## ಸಂಹಿತೋಪಾಸನೆಯೆಂದರೆ ವೇದಗಾನದ ನಾದೋಪಾಸನೆ

೨ ನೆಯ ಪ್ರಕರಣದಲ್ಲಿರುವ ವಿಷಯಗಳು :—[ನಾವು ಉಚ್ಚರಿಸುವ ಒಂದು ಪದದ ಪ್ರಥಮಾಕ್ಷರಕ್ಕೆ ನಮ್ಮ ದೇಹದಲ್ಲಿ ಯಾವ ಯಾವುದು ಆಶ್ರಯಗಳಾಗಿರುವುವು, ಪದದ ಎರಡನೇ ಅಕ್ಷರಕ್ಕೆ ನಮ್ಮ ದೇಹದಲ್ಲಿ ಯಾವ ಯಾವುದು ಸಹಕಾರಿಗಳಾಗಿರುವುವು, ಪದದ ಪ್ರಥಮಾಕ್ಷರವನ್ನು ದ್ವಿತೀಯಾಕ್ಷರವನ್ನು ಸೇರಿಸುವುದಕ್ಕೆ ಯಾವ ಯಾವುದು ಸಹಕಾರಿಗಳಾಗಿರುವುವು. ಒಂದನೇ ಅಕ್ಷರಕ್ಕೆ ಎರಡನೇ ಅಕ್ಷರ, ಎರಡನೇ ಅಕ್ಷರಕ್ಕೆ ಮೂರನೇ ಅಕ್ಷರ, ಹೀಗೆಯೇ ಅಕ್ಷರಗಳು ಒಂದಕ್ಕೊಂದು ಸೇರಿಕೊಂಡು ಪದಗಳಾಗುವ, ಪದಗಳು, ವಾಕ್ಯಗಳಾಗುವ ಮತ್ತು ಅಕ್ಷರಗಳಿಗೆ ಉದಾತ್ತಾದಿ ಸ್ವರಗಳೂ ಸೇರಿ

ಕೊಂಡು ನಾದಬ್ರಹ್ಮದಲ್ಲಿ ಸಂಹಿತೆಯೆಂದರೆ ವೇದಗಾನವೆನಿಸುವ ವಿಚಾರ ಗಳನ್ನು ವಿವರಿಸಿರುವುದು. ಶಾಸ್ತ್ರೋಕ್ತವಾದ ವೇದಗಾನದಿಂದ ದೇವತೆಗಳು ಸುಪ್ರೀತರಾಗಿ ಹೇಗೆ ಪ್ರಾಪಂಚಿಕದ ಫಲಗಳನ್ನು ಕೊಡುವರೆಂಬುದನ್ನೂ ವಿವರಿಸಿರುವುದು.]

**ಸಹ ನೌ ಯಶಃ । ಸಹ ನೌ ಬ್ರಹ್ಮವರ್ಚಸಮ್ । ಅಥಾತಃ ಸಗ್ಂಹಿತಾಯಾ ಉಪನಿಷದಂ ವ್ಯಾಖ್ಯಾಸ್ಯಾಮಃ । ಪಞ್ಚ ಸ್ವಧಿಕರಣೇಷು । ಅಧಿಲೋಕಮಧಿಜ್ಯೌತಿಷಮಧಿವಿದ್ಯಮಧಿ ಪ್ರಜಮಧ್ಯಾತ್ಮಮ್ । ತಾ ಮಹಾಸಗ್ಂಹಿತಾ ಇತ್ಯಾಚಕ್ಷತೇ । ಅಥಾಧಿ ಲೋಕಮ್। ಪೃಥಿವೀ ಪೂರ್ವರೂಪಮ್। ದ್ಯೌರುತ್ತರ ರೂಪಮ್ । ಆಕಾಶಃ ಸನ್ಧಿಃ । ವಾಯುಃ ಸನ್ಧಾನಮ್ । ಇತ್ಯಧಿ ಲೋಕಮ್। ಅಥಾಧಿಜ್ಯೌತಿಷಮ್ । ಅಗ್ನಿಃ ಪೂರ್ವರೂಪಮ್ । ಆದಿತ್ಯ ಉತ್ತರರೂಪಮ್ । ಆಪಃ ಸನ್ಧಿಃ । ವೈದ್ಯುತಃ ಸನ್ಧಾ ನಮ್ । ಇತ್ಯಧಿಜ್ಯೌತಿಷಮ್ । ಅಥಾಧಿವಿದ್ಯಮ್ । ಆಚಾರ್ಯಃ ಪೂರ್ವರೂಪಮ್ । ಅನ್ತೇವಾಸ್ಯುತ್ತರರೂಪಮ್ । ವಿದ್ಯಾ ಸನ್ಧಿಃ । ಪ್ರವಚನಗ್ಂ ಸನ್ಧಾನಮ್। ಇತ್ಯಧಿವಿದ್ಯಮ್ । ಅಥಾಧಿ ಪ್ರಜಮ್। ಮಾತಾ ಪೂರ್ವರೂಪಮ್। ಪಿತೋತ್ತರರೂಪಮ್ । ಪ್ರಜಾಸನ್ಧಿಃ । ಪ್ರಜನನಗ್ಂ ಸನ್ಧಾನಮ್ । ಇತ್ಯಧಿಪ್ರಜಮ್ । ಅಥಾಧ್ಯಾತ್ಮಮ್ । ಅಧರಾ ಹನುಃ ಪೂರ್ವರೂಪಮ್ । ಉತ್ತ ರಾಹನುರುತ್ತರರೂಪಮ್। ವಾಕ್ ಸನ್ಧಿಃ। ಜಿಹ್ವಾ ಸನ್ಧಾನಮ್। ಇತ್ಯಧ್ಯಾತ್ಮಮ್ । ಇತೀಮಾ ಮಹಾಸಗ್ಂಹಿತಾಃ । ಯ ಏವ ಮೇತಾ ಮಹಾಸಗ್ಂಹಿತಾ ವ್ಯಾಖ್ಯಾತಾ ವೇದ । ಸನ್ಧೀಯತೇ ಪ್ರಜಯಾ ಪಶುಭಿಃ । ಬ್ರಹ್ಮವರ್ಚಸೇನಾನ್ನಾದ್ಯೇನ ಸುವ ರ್ಗೇಣ ಲೋಕೇನ ॥೩॥**

ನಮ್ಮಿಬ್ಬರಿಗೂ ಜೊತೆಯಲ್ಲಿಯೇ ಕೀರ್ತಿಯುಂಟಾಗಲಿ. ನಮ್ಮಿಬ್ಬರಿಗೂ ಜೊತೆಯಲ್ಲಿಯೇ ಬ್ರಹ್ಮ ವರ್ಚಸ್ಸುಂಟಾಗಲಿ ! ಇನ್ನು ಆದ್ದರಿಂದ ಸಂಹಿತೆಯ ಉಪನಿಷತ್ತನ್ನು ವಿವರಿಸುವೆವು. ಐದು ಅಧಿಕರಣಗಳಲ್ಲಿ ಅಧಿಲೋಕ, ಅಧಿಜ್ಯೌತಿಷ,

ಅಧಿವಿದ್ಯ, ಅಧಿಪ್ರಜ, ಅಧ್ಯಾತ್ಮ, ಇವುಗಳನ್ನು ಮಹಾ ಸಂಹಿತೆಗಳೆಂದು ಕರೆಯುತ್ತಾರೆ.

(೧) ಈಗ **ಅಧಿಲೋಕ** :—ಪೃಥಿವಿಯು ಹಿಂದಿನ ರೂಪವು. ದ್ಯುಲೋಕವು ಮುಂದಿನ ರೂಪವು. ಆಕಾಶವು ಸಂಧಿಃ. ವಾಯುವು ಸಂಧಾನವು. ಇಂತು ಅಧಿಲೋಕವಾಯಿತು.

(೨) ಅನಂತರ **ಅಧಿಜ್ಯೌತಿಷ** :—ಅಗ್ನಿಯು ಹಿಂದಿನ ರೂಪವು. ಆದಿತ್ಯನು ಮುಂದಿನ ರೂಪವು. ಅಪ್ಪು ಸಂಧಿ. ಮಿಂಚು ಸಂಧಾನವು. ಇಂತು ಅಧಿಜ್ಯೋತಿಷವಾಯತು.

(೩) ಆಮೇಲೆ **ಅಧಿವಿದ್ಯ** :—ಆಚಾರ್ಯನು ಹಿಂದಿನ ರೂಪವು. ಶಿಷ್ಯನು ಮುಂದಿನ ರೂಪವು. ವಿದ್ಯೆಯು ಸಂಧಿ. ಹೇಳಿ ಕೊಡುವುದೇ ಸಂಧಾನವು. ಇಂತು ಅಧಿವಿದ್ಯವಾಯಿತು.

(೪) ತದನಂತರ **ಅಧಿಪ್ರಜ** :—ತಾಯಿಯು ಹಿಂದಿನ ರೂಪವು. ತಂದೆಯು ಮುಂದಿನ ರೂಪವು. ಪ್ರಜೆಯು ಸಂಧಿಯು, ಪ್ರಜನನವು ಸಂಧಾನವು. ಇಂತು ಅಧಿಪ್ರಜವಾಯಿತು.

(೫) ಅನಂತರ **ಅಧ್ಯಾತ್ಮ** :—ಕೆಳಗಿನ ದವಡೆಯು ಹಿಂದಿನ ರೂಪವು ; ಮೇಲಿನ ದವಡೆಯು ಮುಂದಿನ ರೂಪವು. ವಾಕ್ಕುಸಂಧಿ. ನಾಲಗೆಯು ಸಂಧಾನವು. ಇಂತು ಅಧ್ಯಾತ್ಮವಾಯಿತು.

ಇವು ಮಹಾ ಸಂಹಿತೆಗಳು. ಈ ವಿವರಿಸಿದ ದೊಡ್ಡ ಸಂಹಿತೆಗಳನ್ನು ಯಾವಾತನು ತಿಳಿಯುವನೋ ಅವನು, ಮಕ್ಕಳು, ದನಕರುಗಳು, ಬ್ರಹ್ಮವರ್ಚಸ್ಸು, ಅನ್ನಾದ್ಯವು, ಸ್ವರ್ಗಲೋಕ ಇವುಗಳಿಂದ ಸಂಯುಕ್ತನಾಗುತ್ತಾನೆ.

ಹಿಂದಿನ "ಓಂ ಶೀಕ್ಷಾಂ ವ್ಯಾಖ್ಯಾಸ್ಯಾಮಃ" ಎಂಬ ಮಂತ್ರದಲ್ಲಿ ತಿಳಿಸಿದ ವರ್ಣ, ಸ್ವರ, ಮಾತ್ರಾ ಮುಂತಾದುವುಗಳನ್ನೊಳಗೊಂಡ ವೇದಾಧ್ಯಯನದ ಗಾನರೂಪವು ಒಂದು ಯಂತ್ರದ ಕಾರ್ಯದಂತೆ ಇದೆ. ಒಂದು ಯಂತ್ರದಲ್ಲಿರುವ ಅನೇಕ ಭಾಗಗಳು ಒಂದಕ್ಕೊಂದು ಆಶ್ರಯವಾಗಿ ಸಹಕರಿಸಿಕೊಂಡು ಇರುವುದರಿಂದ ಯಂತ್ರದ ಕಾರ್ಯವು ನಡೆಯುವುದು. ಈ ಯಂತ್ರದಲ್ಲಿರುವ ಭಾಗಗಳಂತೆ ವೇದಾಧ್ಯಯನದ ಗಾನರೂಪದಲ್ಲೂ ಒಂದಕ್ಕೊಂದು ಆಶ್ರಯವಾದ ಐದು ಭಾಗಗಳಿವೆ. ಈ ಭಾಗಗಳೇ ಈ ಮಂತ್ರದಲ್ಲಿ ಹೇಳಿರುವ ಐದು ಅಧಿಕರಣಗಳು. ಈ ಐದು ಅಧಿಕರಣಗಳಲ್ಲೂ ನಾಲಕ್ಕು ಅಂತರ್ವಿಭಾಗಗಳ ಸಮೂಹಗಳು ಇರುತ್ತವೆ. ಅವು ಯಾವುವೆಂದರೆ :—

| | | | | | |
|---|---|---|---|---|---|
| (೧) | ಮಾತಾ | ಪೃಥಿವಿ | ಅಗ್ನಿ | ಆಚಾರ್ಯ | ಕೆಳಗಿನ ದವಡೆ |
| | ಎಂಬ ಪೂರ್ವರೂಪದ ಸಮೂಹ | | | | |
| (೨) | ಪಿತಾ | ಸ್ವರ್ಗಲೋಕ | ಆದಿತ್ಯ | ಶಿಷ್ಯ | ಮೇಲಿನ ದವಡೆ |
| | ಎಂಬ ಉತ್ತರರೂಪದ ಸಮೂಹ | | | | |
| (೩) | ಪ್ರಜೆ | ಆಕಾಶ | ಅಪ್ಪು | ವಿದ್ಯೆ | ವಾಕ್ಕು |
| | ಎಂಬ ಸಂಧಿಗಳ ಸಮೂಹ | | | | |
| (೪) | ಪ್ರಜನನ | ವಾಯು | ಮಿಂಚು | ಪ್ರವಚನ | ಜಿಹ್ವಾ |
| | ಎಂಬ ಸಂಧಾನಗಳ ಸಮೂಹ | | | | |

ಅಧಿಕರಣವೆಂದರೆ ಆಶ್ರಯವೆಂದು ಭಾಷ್ಯದಲ್ಲಿ ಅರ್ಥವಿದೆ. ಈ ಐದರಲ್ಲಿ "ಮಾತಾ ಪೂರ್ವರೂಪಂ । ಪಿತೋತ್ತರ ರೂಪಂ" । ಎಂದರೆ ಉಚ್ಚರಿಸುವ ಶಬ್ದದಲ್ಲಿ ಮೊದಲಕ್ಷರವೇ ಮಾತೃಕಾ ಶಕ್ತಿಯು. ಎರಡನೆಯದೇ ಪಿತಾರೂಪವಾಗಿದೆ.

(೧) ಅಧಿರೂಪವಾದ ಮಾತೃಕಾ ಎಂದರೆ ಅಕ್ಷರಕ್ಕೆ ಆಶ್ರಯವಾಗಿ ಸಹಕರಿಸುವವುಗಳೇ ಪೃಥಿವಿ, ಅಗ್ನಿ, ಆಚಾರ್ಯ ಅಂದರೆ ಗುರು, ಕೆಳಗಿನ ದವಡೆ. ಪೃಥಿವಿ ಎಂದರೆ ಭೂತತ್ವವಾದ ನಮ್ಮ ಸ್ಥೂಲದೇಹ, ಸ್ಥೂಲದೇಹದ ಆಶ್ರಯವಿಲ್ಲದೆ ಇದ್ದರೆ ಅಕ್ಷರಕ್ಕೆ ನಿಲ್ಲಲು ಸ್ಥಳವೇ ಇಲ್ಲ. ಆದುದರಿಂದ ಪೃಥಿವಿಯು ಅಕ್ಷರಕ್ಕೆ ಸಹಾಯಕವಾಗಿದೆ. ಆದಿರೂಪವಾದ ಅಗ್ನಿಯು ಅಕ್ಷರಕ್ಕೆ ಉಚ್ಚಾರಣಾ ಬಲವನ್ನೂ, ಕಾಂತಿಯನ್ನೂ ಕೊಟ್ಟು ಸಹಕರಿಸುವುದು. ಆಚಾರ್ಯನೂ ಆದಿ ರೂಪನಾಗಿ ವರ್ಣೋಚ್ಚಾರಣೆಯ ಬೋಧಕನಾಗಿರುತ್ತಾನೆ. ಪ್ರಥಮ ಅಕ್ಷರದ ಉಚ್ಚಾರಣೆಗೆ ಕೆಳಗಿನ ದವಡೆಯೂ ಆಶ್ರಯವಾಗಿ ಸಹಕರಿಸುತ್ತದೆ. ಮಾತೃರೂಪವಾದ ಪ್ರಥಮ ಅಕ್ಷರಕ್ಕೆ ಮೇಲಿನವುಗಳೆಲ್ಲಾ ಆಶ್ರಯವಾಗಿ ಸಹಾಯಕಗಳಾಗಿವೆ. ಇವೇ ಪೂರ್ವ ರೂಪದ ಸಮೂಹ.

(೨) ಆದಿರೂಪವಾದ ಮಾತೆಗೆ ಪಿತನು ಅನಂತರದವನಾಗಿರುವಂತೆ ಆದಿರೂಪವಾದ ಅಕ್ಷರಕ್ಕೆ ನಮ್ಮ ತಾಲುಮೂಲದಲ್ಲಿರುವ ದ್ಯುಲೋಕ ಅಂದರೆ ಸ್ವರ್ಗಲೋಕವೂ ಆದಿತ್ಯನೂ ಶಿಷ್ಯನೂ ಮೇಲಿನ ದವಡೆಯೂ ಸಹಕರಿಸುವವುಗಳಾಗಿವೆ. ಇವೇ ಉತ್ತರ ರೂಪದ ಸಮೂಹ.

(೩) ಮೊದಲಿನ ಅಕ್ಷರವನ್ನೂ ಎರಡನೇ ಅಕ್ಷರವನ್ನೂ ಸೇರಿಸುವ "ಸಂಧಾನ" ಎಂಬ ಕಾರ್ಯಕ್ಕೆ ವಾಯುವು, ಮಿಂಚು, ಪ್ರವಚನ (ಗುರುವು ಶಿಷ್ಯನಿಗೆ ಹೇಳಿಕೊಡುವಿಕೆ), ಪ್ರಜನನವು, ನಾಲಿಗೆಯೂ ಆಶ್ರಯವಾಗಿ ಸಹಾಯಕಗಳಾಗಿವೆ. ಇವು ಸಂಧಾನಗಳ ಸಮೂಹ.

ಮೊದಲನೇ ಅಕ್ಷರವು ಉದಾತ್ತ ಅನುದಾತ್ತಾದಿ ಸ್ವರಗಳೊಡನೆ ಎರಡನೇ ಅಕ್ಷರವನ್ನು ಸೇರಲು ಮೇಲೆ ತಿಳಿಸಿದವುಗಳ ಸಹಾಯಗಳೆಲ್ಲಾ ಅತ್ಯವಶ್ಯಕವಾಗಿ ಬೇಕಾಗಿದೆ. ಹೀಗೆ ಎಡಬಿಡದೆ ಒಂದಕ್ಷರಕ್ಕೆ ಮತ್ತೊಂದು ಅಕ್ಷರ ಮತ್ತೊಂದು ಅಕ್ಷರಕ್ಕೆ ಇನ್ನೊಂದು ಅಕ್ಷರ ಹೀಗೆ ಸೇರಿಕೊಂಡು ಪದಗಳಾಗುತ್ತವೆ. ಪದಗಳು ಸೇರಿ ವಾಕ್ಯಗಳಾಗುತ್ತವೆ. ವಾಕ್ಯಗಳು ಸೇರಿ ಒಂದು ಮಂತ್ರವೆನಿಸಿಕೊಳ್ಳುತ್ತದೆ. ಮೇಲಿನ ತತ್ವಗಳ ಸಮರ್ಥನೆಗೆ ಸಂಗೀತ ಶಾಸ್ತ್ರದ ವಾಕ್ಯವನ್ನೂ, ಯೋಗಶಿಖೋಪನಿಷತ್ತಿನ ವಾಕ್ಯವನ್ನೂ ಕೆಳಗೆ ಬರೆದಿರುವುದು. ಪಾಠಕರು ಕೆಳಗಿನ ಆಧಾರ ವಾಕ್ಯಗಳನ್ನು ಪರಿಸಿ ವಿಮರ್ಶಿಸಿಕೊಂಡರೆ ಮೇಲಿನ ತತ್ವಗಳ ವಿಚಾರಗಳು ಮನದಟ್ಟಾಗುವುದರಲ್ಲಿ ಸಂಶಯವಿಲ್ಲ.

"ಗಾನರಹಸ್ಯ ಪ್ರಕಾಶಿನೀ" ಮುಂತಾದ ಸಂಗೀತಶಾಸ್ತ್ರ ಗ್ರಂಥಗಳಲ್ಲಿ

**ಆತ್ಮಾ ವಿವಕ್ಷ ಮಾಣೋಽಯಂ ಮನಃ ಪ್ರೇರಯತೇ ಮನಃ ।**
**ನಾಭಿಸ್ಥ ವಹ್ನಿಮಾಹಂತಿ ಸಪ್ರೇರಯತಿ ಮಾರುತಂ ॥**
**ಬ್ರಹ್ಮಗ್ರಂಥಿಸ್ಥಿತೋನಾದಃ ಕ್ರಮಾದೂರ್ಧ್ವಪಥೇಚರನ್ ।**
**ನಾಭಿ ಹೃತ್ಕಂಠ ಮೂರ್ಧಾ ಸ್ಯೇಷಾವಿರ್ಭವತಿ ಸ ಧ್ವನಿಃ ॥**

**ತಾತ್ಪರ್ಯ** : – ಜೀವನು ವಚನಾಪೇಕ್ಷೆಯುಳ್ಳವನಾಗಿ ಮನಸ್ಸನ್ನು ಉದ್ಬೋಧೆ ಮಾಡುತ್ತಾನೆ. ಆ ಮನಸ್ಸು ನಾಭಿಯಲ್ಲಿರುವ ಅಗ್ನಿಯನ್ನು ಪ್ರೇರಿಸುವುದು. ಆದುದರಿಂದ ವರ್ಣಾತ್ಮಕ ಅಥವಾ ಧ್ವನ್ಯಾತ್ಮಕವಾದ ನಾದವು ಹುಟ್ಟುವುದು. ಬ್ರಹ್ಮಗ್ರಂಥಿಯಾದ ಮೂಲಾಧಾರಚಕ್ರದಲ್ಲಿ ಅಂಕುರಿಸಿದ ಆ ನಾದವು ಊರ್ಧ್ವಮುಖವಾಗಿ ಹೊರಟು ನಾಭಿ, ಹೃದಯ, ಕಂಠ, ಶಿರಸ್ಸು, ಬಾಯಿ ಇವುಗಳಲ್ಲಿ ಆವಿರ್ಭಾವವಾಗಿ ಹೊರಹೊರಡುತ್ತದೆ.

ಯೋಗ ಶಿಖೋಪನಿಷತ್ತಿನಲ್ಲಿ—

**ಶಾಖಾಪಲ್ಲವರೂಪೇಣ ತಾಲ್ವಾದಿ ಸ್ಥಾನಘಟ್ಟನಾತ್ ।**
**ಅಕಾರಾದಿ ಕ್ಷಕಾರಾಂತಾನ್ಯಕ್ಷರಾಣಿ ಸಮೀರಯೇತ್ ॥**
**ಅಕ್ಷರೇಭ್ಯಃ ಪದಾನಿಸ್ಯುಃ ಪದೇಭ್ಯೋ ವಾಕ್ಯಸಂಭವಃ ।**
**ಸರ್ವವಾಕ್ಯಾತ್ಮಕಾ ಮಂತ್ರಾ ವೇದಶಾಸ್ತ್ರಾಣಿ ಕೃತ್ಸ್ನಶಃ ।**
**ಪುರಾಣಾನಿಚ ಕಾವ್ಯಾನಿ ಭಾಷಾಶ್ಚ ವಿವಿಧಾ ಅಪಿ ।**
**ಸಪ್ತಸ್ವರಾಶ್ಚ ಗಾಥಾಶ್ಚ ಸರ್ವೇ ನಾದಸಮುದ್ಭವಾಃ ।**
**ಏಷಾ ಸರಸ್ವತೀದೇವೀ ಸರ್ವಭೂತ ಗುಹಾಶ್ರಯಾ ॥**

**ತಾತ್ಪರ್ಯ॥** ಕೊಂಬೆ ಮತ್ತು ಎಲೆಗಳಂತೆ ತಾಲು ಮುಂತಾದ ಸ್ಥಾನಗಳ ಸಂಘಟನೆಗಳಿಂದ ಅಕಾರದಿಂದ ಕ್ಷಕಾರದವರಿಗೆ ಇರುವ ಅಕ್ಷರಗಳ ಶಬ್ದಗಳು ಉದಯಿಸುವುವು. ಅಕ್ಷರಗಳಿಂದ ಪದಗಳು ಪದಗಳಿಂದ ವಾಕ್ಯಗಳು ಉಂಟಾಗುವುವು. ವಾಕ್ಯಗಳಿಂದ ಮಂತ್ರಗಳನ್ನೂ ವೇದಗಳನ್ನೂ ಶಾಸ್ತ್ರಗಳನ್ನೂ ಪುರಾಣಗಳನ್ನೂ ಕಾವ್ಯಗಳನ್ನೂ ರಚಿಸಲ್ಪಟ್ಟಿರುವುದು. ಸಪ್ತ ಸ್ವರಗಳು ಗಾನಗಳು ಭಾಷೆಗಳು ನಾದದಿಂದ ಉದ್ಭವಿಸುವುವು. ನಾದಬ್ರಹ್ಮ ಸ್ವರೂಪಿಣಿಯಾದ ಶ್ರೀ ಸರಸ್ವತೀ ದೇವಿಯು ಸರ್ವ ಪ್ರಾಣಿಗಳ ಹೃದಯಾಕಾಶದಲ್ಲಿದ್ದು ಸರ್ವನಾದಗಳಿಗೂ ಆಶ್ರಯವಾಗಿರುವಳು. ಎಂದು ಹೇಳಿದೆ.

ಯಂತ್ರದ ಯಾವ ಒಂದು ಭಾಗ ಕೆಟ್ಟರೂ ಆ ಯಂತ್ರವೇ ಕೆಲಸಮಾಡಲಾರದು. ಇದರಂತೆ ವೇದಾಧ್ಯಯನಕ್ಕೆ ಸಹಕಾರಿಯಾದ ಪಂಚ ಅಧಿಕರಣದ ಯಾವ ಭಾಗವು ಸರಿಯಾಗಿಲ್ಲದಿದ್ದರೂ ಅದು ವೇದಗಾನವೆನಿಸುವುದಿಲ್ಲ ಮತ್ತು ಮಂತ್ರವೂ ಎನಿಸುವುದಿಲ್ಲ. ಆದುದರಿಂದ ವೇದಾಧ್ಯಯನ ಮಾಡುವ ಅಧಿಕಾರಿಯು ಅಧ್ಯಯನದ ಎಲ್ಲಾ ವಿಚಾರಕ್ಕೂ ಸರಿಯಾದ ಗಮನ ಕೊಟ್ಟು, ಒಂದಕ್ಕೊಂದು ಹೊಂದಿಕೊಂಡು ಇರುವಂತೆ ಅಧ್ಯಯನ ಮಾಡುತ್ತಾ, ಆ ನಾದದಲ್ಲಿಯೇ ನಿರತನಾಗಿದ್ದರೆ ಮಹಾಸಂಹಿತೆಯ ಉಪಾಸನೆ ಎನಿಸುವುದು. ಉಪಾಸನೆಯೆಂದರೆ ನಿರತವಾಗಿ ಇರುವುದೆಂಬ ಅರ್ಥವು ಭಾಷ್ಯದಲ್ಲಿಯೆ ಇದೆ.

ವೇದಗಾನವು ಶಾಸ್ತ್ರೋಕ್ತವಾಗಿದ್ದರೆ ಪಂಚ ಅಧಿಕರಣಗಳಲ್ಲಿ ಹೇಳಿರುವ ಸಂಧಿಯ (ಫಲದ) ಮಹತ್ತನ್ನು ಹೊಂದುವುದು. ಮಾತಾ-ಪಿತೃಗಳ ಸಂಯೋಗವಾದರೆ ಪುತ್ರ ಪ್ರಾಪ್ತಿಯೇ ಫಲ. ಈ ಫಲಪ್ರಾಪ್ತಿಯೇ "ಸಂಧಿ" ಎನಿಸಿಕೊಳ್ಳುವುದು. ಹೀಗೆಯೇ ಪಂಚ ಅಧಿಕರಣಗಳಿಗೂ ಇದೆ.

ಹೇಗೆಂದರೆ ಶಬ್ದ ಅಥವಾ ನಾದವು ಆಕಾಶದ ಗುಣ. ವೇದಗಾನವು ನಾದ ಸ್ವರೂಪವಾಗಿ ಆಕಾಶದಲ್ಲಿ ಪ್ರಸರಿಸುವ ಫಲವನ್ನು ಹೊಂದುವುದರಿಂದ ಆಕಾಶವು ಸಂಧಿಯಾಗುತ್ತೆ. ಅಪ್ ಸಂಧಿಯೆಂದರೆ-ತೃಷ್ಣೆಯುಂಟಾದಾಗ ಜಲಪಾನ ಮಾಡುವುದರಿಂದ ಆಯಾಸ ಪರಿಹಾರವಾಗಿ ಸುಖವನ್ನು ಅನುಭವಿಸುವಂತೆ, ವೇದಗಾನವು ಹಿತವನ್ನೂ ಸುಖವನ್ನೂ ಕೊಡುವುದು. 'ಆಪ್ಯಂತ ಇತಿ ಆಪಃ' ಎಂಬ ಅರ್ಥದಂತೆ ನಾದವನ್ನು ಕೇಳಲು ಇಷ್ಟವಾಗುವಂತೆ ಆಕರ್ಷಿಸುವುದು. ರಸೋವೈಸಃ ಎಂಬಂತೆ ವೇದಗಾನವು ಆನಂದವೆಂಬ ರಸಾಸ್ವಾದಕವಾಗಿರುವುದು. ವಿದ್ಯಾಸಂಧಿಃ ಎಂದರೆ—ವೇದಮಂತ್ರವು ಮತ್ತು ನಾದವು ವಿದ್ಯೆಯ ರೂಪವಾಗಿದೆ. ಪ್ರಜಾಸಂಧಿಃ ಎಂದರೆ—ಮಾತಾ ಪಿತೃಗಳಿಗೆ ಪುತ್ರ ಪುತ್ರಿಯರೇ ಪ್ರಜೆಗಳು. ಮಾತಾಪಿತೃಗಳನ್ನು ಪುತ್ರನು ಪುನ್ನಾಮ ನರಕದಿಂದ ದಾಟಿಸುವಂತೆ ವೇದಗಾನವು ವೇದಾಧ್ಯಯನಮಾಡುವವರಿಗೆ ಪಾಪ ಪರಿಹಾರಕವಾದುದು. ವಾಕ್ಯ ಸಂಧಿಯೆಂದರೆ—ನಾದವು ಅಥವಾ ಶಬ್ದವು ಬೋಧಕ ರೂಪವಾದದ್ದಾಗಿದೆ. ಈ ಮೇಲಿನ ಮಹತ್ತುಗಳೆಲ್ಲಾ ವೇದಗಾನದಲ್ಲಿ ಇರುವುವು.

ಈ ಸಂಹಿತೆಗಳನ್ನು ಯಾರು ಉಪಾಸನೆ ಮಾಡುವರೋ ಅವರಿಗೆ ಸಂತಾನ, ಪಶುಗಳು, ಬ್ರಹ್ಮವರ್ಚಸ್ಸು, ಸ್ವರ್ಗಲೋಕವಾಸ ಇವುಗಳು ಪ್ರಾಪ್ತವಾಗುವುವೆಂದು ಉಪನಿಷತ್ತಿನಲ್ಲಿ ಹೇಳಿದೆ. ಸಂಹಿತೋಪಾಸನೆಗಳನ್ನು ಮಾಡಿದರೆ ಇವನಿಗೆ ಮೇಲಿನವುಗಳನ್ನೆಲ್ಲಾ ಯಾರು ಅನುಗ್ರಹಿಸಿಕೊಡುತ್ತಾರೆಂಬುದನ್ನು ತಿಳಿದುಕೊಳ್ಳುವುದರಿಂದ ವೇದಗಾನದ ನಾದ ಬ್ರಹ್ಮದ ಮಹತ್ತು ಎಂತಹುದೆಂಬುದು ನಮಗೆ ಗೊತ್ತಾಗುವುದು.

ವೇದದ ಪ್ರತಿಯೊಂದು ಮಂತ್ರಕ್ಕೂ ಮಂತ್ರದಷ್ಟೃಗಳಾದ ಋಷಿಗಳೂ, ಮಂತ್ರಾಭಿಮಾನಿ ದೇವತೆಗಳೂ ಇರುತ್ತಾರೆ. ಅಲ್ಲದೆ ಯಾವ ಮಂತ್ರವೇ ಆಗಲಿ ದೇವತೆಗಳ ಅಥವಾ ದೇವತಾ ಶಕ್ತಿಗಳಿಗೆ ಸಂಬಂಧ ಪಟ್ಟೇ ಇರುವುದು. ಇಂದ್ರ, ಅಗ್ನಿ, ಯಮ, ವರುಣ, ಸೂರ್ಯ, ಚಂದ್ರ ಮುಂತಾದ ದೇವತೆಗಳೂ, ಬ್ರಹ್ಮ, ವಿಷ್ಣು, ಈಶ್ವರ ಗಣಪತಿ, ಲಕ್ಷ್ಮೀ, ಸರಸ್ವತೀ, ಪಾರ್ವತೀ ಮುಂತಾದ ದೇವತಾ ಶಕ್ತಿಗಳೂ ಆಕಾಂಶಾಂತರ್ಗತವಾದ ಕಳಾಸ್ವರೂಪದಲ್ಲಿ ನೆಲಸಿರುತ್ತಾರೆ.

ಅಧಿಕಾರಿಯು ಶಾಸ್ತ್ರೋಕ್ತವಾಗಿ ಮಾಡುವ ವೇದಗಾನದ ಚಲನೆಯು ಕಳಾಸ್ವರೂಪದಲ್ಲಿರುವ ದೇವತೆಗಳ ಅಥವಾ ದೇವತಾಶಕ್ತಿಗಳಿಗೆ ಸಂಬಂಧವಾಗುವುದು. ವೇದಮಂತ್ರಗಾನದ ನಾದದ ಚಲನೆಯು ಅಧಿಕಾರಿಯ ಮನಶ್ಶಕ್ತಿಯೊಡಗೂಡಿ ಆಕಾಶದಲ್ಲಿರುವ ವಿದ್ಯುಚ್ಛಕ್ತಿಯ ಅಯಃಕಾಂತ ಅಲೆಗಳ ಮೂಲಕ ಕಳಾರೂಪದಲ್ಲಿರುವ ಆಯಾಯಾ ದೇವತಾಶಕ್ತಿಗಳೊಡನೆ ಸಂಬಂಧವನ್ನು ಪಡೆಯುವುದು. ನಮಗೂ ದೇವತಾಶಕ್ತಿಗಳಿಗೂ ಸಂಬಂಧ ಮಾಡಿಸುವುದು ಅಗ್ನಿಯು. ಇದಕ್ಕೆ **"ಅಗ್ನಿಮುಖಾವೈ ದೇವಾಃ"** ಎಂಬ ವೇದಪ್ರಮಾಣವೇ ಇರುವುದು.

ಈ ಮೇಲಿನ ಆಧಾರ ವಾಕ್ಕಿಗೆ ಅನುಸಾರವಾಗಿ ಸಂಹಿತೆಯು ಪಂಚ ಅಧಿಕರಣ ಗಳಲ್ಲಿ **"ಅಗ್ನಿಃಪೂರ್ವರೂಪಂ। ಆದಿತ್ಯ ಉತ್ತರರೂಪಂ। ಆಪಃಸಂಧಿಃ। ವೈದ್ಯುತಃ ಸನ್ಧಾನಮ್।"** ಎಂದು ಹೇಳಿರುವುದರಲ್ಲಿ ಆಕಾಶದಲ್ಲಿ ವ್ಯಾಪಿಸಿರುವ ವಿದ್ಯುಚ್ಛಕ್ತಿಯ ಅಯಃಕಾಂತ ಅಲೆಗಳ ಮೂಲಕವೇ ಕಳಾರೂಪದಲ್ಲಿರುವ ದೇವತಾ ಶಕ್ತಿಗಳೊಡನೆ ಸಂಬಂಧ ಪಡೆಯುವುದು. ಉದಾತ್ತ ಅನುದಾತ್ತಾದಿ ಸ್ವರಗಳೊಡ ಗೂಡಿದ ವೇದ ಮಂತ್ರವು "ಮನನಾತ್ತ್ರಾಣನಾತ್ ಮಂತ್ರಃ" ಎಂಬ ಅರ್ಥದಂತೆ ಮಹತ್ತಾದ ನಾದ ಬ್ರಹ್ಮಶಕ್ತಿಯುಳ್ಳದಾದ್ದರಿಂದ ದೇವತಾಶಕ್ತಿಗಳೊಡನೆ ಸಂಬಂಧವನ್ನು ಹೊಂದುವುದು. ವೇದಮಂತ್ರಗಾನ ಮಾಡುವವನ ಪರಿಶುದ್ಧತೆ ಕರ್ಮನಿಷ್ಠೆ ಭಕ್ತಿಶ್ರದ್ಧಾ ಮನಶಕ್ತಿಗಳಿದ್ದಂತೆ ಆಕಾಶದಲ್ಲಿರುವ ವಿದ್ಯುಚ್ಛಕ್ತಿಯ ಅಯಃಕಾಂತ ಅಲೆಗಳಾಗುವುವು. ಶಬ್ದಾರ್ಥಗಳಲ್ಲಿ ಅರ್ಥಕ್ಕೆ ಮಹತ್ತಿರುವಂತೆ ವೇದಗಾನದಲ್ಲಿ ಮಾತ್ರ ಶಬ್ದಕ್ಕೂ ಮಹತ್ತಿರುವುದು. ಕಳಾಸ್ವರೂಪದಲ್ಲಿರುವ ದೇವತೆಗಳು ದೇವತಾಶಕ್ತಿಗಳು ಅಧಿ ಕಾರಿಯ ವೇದಗಾನಕ್ಕೆ ಸುಪ್ರೀತರಾಗಿಸಂತಾನ, ಪಶುಗಳು, ಬ್ರಹ್ಮವರ್ಚಸ್ಸು ಸ್ವರ್ಗ ಲೋಕವಾಸ ಮುಂತಾದ ಫಲಗಳನ್ನು ಅನುಗ್ರಹಿಸಿ ಕೊಡುತ್ತಾರೆ.

# ೩ನೆಯ ಪ್ರಕರಣ

## ಓಂಕಾರ ಸ್ವರೂಪನಾದ ಈಶ್ವರನ ಅನುಗ್ರಹವನ್ನು ಅಗತ್ಯ ವಾಗಿ ಸಂಪಾದಿಸಬೇಕೆಂಬ ವಿಚಾರ

೩ನೆಯ ಪ್ರಕರಣದಲ್ಲಿರುವ ವಿಷಯಗಳು :—[ಋಷಭಃ, ಛಂದಸಾಂ ಎಂಬ ಪದಗಳು ಹೇಗೆ ಓಂಕಾರ ಸ್ವರೂಪನಾದ ಈಶ್ವರನನ್ನು ಪ್ರತಿಪಾದಿಸುವು ದೆಂಬುದರ ವಿವರಣೆ. ವೇದವು ಪರಬ್ರಹ್ಮಸ್ವರೂಪವೆಂಬುದರ ವಿವರಣೆ. ಗುರು ಕುಲ ವಾಸದಲ್ಲಿರುವ ಶಿಷ್ಯನು ಬ್ರಹ್ಮಜ್ಞಾನವನ್ನು ಹೊಂದುವ ಬುದ್ಧಿಶಕ್ತಿ ಯನ್ನೂ, ಅನುಷ್ಠಾನದ ಧಾರಣಾಶಕ್ತಿಯನ್ನೂ, ಆತ್ಮಜ್ಞಾನವನ್ನು ಪಡೆಯಲು ದೇಹೇಂದ್ರಿಯಗಳ ಅರ್ಹತೆಯನ್ನೂ, ಅಜ್ಞಾನವನ್ನು ಪರಿಹರಿಸಿ ಪರಬ್ರಹ್ಮ ನನ್ನು ಆವರಿಸಿರುವ ನಿನ್ನ ಸ್ವರೂಪದ ಮೂಲಕ ಪರಬ್ರಹ್ಮನನ್ನು ಹೊಂದು ವಂತೆಯೂ, ಒಳ್ಳೇ ವಿವೇಚನಾಶಕ್ತಿಯನ್ನು ಕೊಟ್ಟು ಅನಂತರ ಧನಧಾನ್ಯ ಸಂಪತ್ತನ್ನು ಅನುಗ್ರಹಿಸಿಕೊಡೆಂದು ಓಂಕಾರ ಸ್ವರೂಪಿಯಾದ ಈಶ್ವರನಲ್ಲಿ

ಪ್ರಾರ್ಥಿಸುವಿಕೆ. ಆಚಾರ್ಯನು ತನ್ನ ಶಿಷ್ಯರ ಶ್ರೇಯೋಭಿವೃದ್ಧಿಗೂ ತಾನು ಓಂಕಾರಸಾಯುಜ್ಯವನ್ನು ಹೊಂದುವುದಕ್ಕೂ ಈಶ್ವರನನ್ನು ಪ್ರಾರ್ಥಿಸಿ ಹೋಮ ಮಾಡುವಿಕೆ.]

**ಯಶ್ಛನ್ದ ಸಾಮೃಷಭೋ ವಿಶ್ವರೂಪಃ ।**
**ಛನ್ದೋ ಭ್ಯೋಽಧ್ಯಮೃ ತಾತ್ ಸಂಬಭೂವ ।**

ಈ ಮಂತ್ರದ ಆದಿಯಲ್ಲಿ ಇರುವ **ಛಂದಸಾಂ, ಋಷಭಃ** ಎಂಬ ಪದಗಳಿಗೆ ವೇದಗಳಿಗೆ ಪ್ರಧಾನನಾದ ಓಂಕಾರ ಸ್ವರೂಪನಾದ ಈಶ್ವರನೆಂದು ಭಾಷ್ಯದಲ್ಲಿ ಅರ್ಥ ವನ್ನು ಬರೆದಿದೆ. **ಛಂದಸಾಂ, ಋಷಭಃ** ಎಂಬ ಎರಡು ಪದಗಳ ವಿಚಾರವನ್ನು ಕೊಂಚ ಮಟ್ಟಿಗೆ ವಿವರಿಸೋಣ. ನಾದಬ್ರಹ್ಮವಾದ ಸಂಗೀತ ಶಾಸ್ತ್ರದ ಸಪ್ತ ಸ್ವರ ಗಳಲ್ಲಿ ಋಷಭವು ಎರಡನೇ ಸ್ವರ. ಛಂದೋವತಿ ಎಂಬುದು ಬಹುಮುಖ್ಯವಾದ ಶ್ರುತಿ. ಇವುಗಳನ್ನು ವಿವರಮಾಡಿ ಭಾಷ್ಯದ ವಾಕ್ಯನ್ನು ಪುಷ್ಟೀಕರಿಸೋಣ. ಋಷಭ ಸ್ವರಕ್ಕೆ ಸಂಗೀತ ಶಾಸ್ತ್ರದಲ್ಲಿ

**ತ್ರಯೋದಶ್ಯಾಂತು ಮಧ್ಯಾನ್ಹೇ ಋಷಭಃ**
**ಪುಷ್ಯಋಕ್ಷಕೇ । ಮಾಹೇಶ್ವರೀ ದೇವತಾಸ್ಯಾತ್**
**ಭೃಗುಸ್ತಸ್ಯ ಋಷಿರ್ಮತಃ ॥**

ಎಂದು ಹೇಳಿರುವುದರಲ್ಲಿ, ಈಶ್ವರಿಯೇ ಋಷಭ ಸ್ವರಕ್ಕೆ ದೇವತೆಯಾಗಿರುವುದರಿಂದ ಈಶ್ವರನೂ ಜೊತೆಯಲ್ಲಿ ಇದ್ದೇ ಇರುತ್ತಾನೆ. ಋಷಭ ಎಂಬ ಪದಕ್ಕೆ "ಋಷತಿಗಾಂ ಪ್ರತಿಗಚ್ಛತೀತಿ ಋಷಭಃ ಋಗತೌ ಗಾಂ" ಎಂದರೆ ಪ್ರಪಂಚವನ್ನೂ ನಾದವನ್ನೂ ಕುರಿತು ಹೋಗುವಿಕೆ, ಅಂದರೆ "ತತ್‌ಸೃಷ್ಟ್ವಾತದೇವಾನು ಪ್ರಾವಿಶತ್" ಎಂಬ ಶ್ರುತಿ ವಾಕ್ಯದಂತೆ ಈಶ್ವರಿಯೊಡಗೂಡಿದ ಈಶ್ವರನು ದೇವತೆಗಳಾದಿಯಾಗಿ ಸಕಲ ಬ್ರಹ್ಮಾಂಡ ಪಿಂಡಾಂಡಗಳನ್ನು ಸೃಷ್ಟಿಸಿ ಅದರಲ್ಲಿ ಅಂತರ್ಯಾಮಿಯಾಗಿರುವನೆಂಬ ಅರ್ಥವೇ ಋಷಭ ಪದದ ಅರ್ಥ. ಋಷಭವೆಂದರೆ ಅತ್ಯಂತ ಶ್ರೇಷ್ಠವೆಂದೂ ಅರ್ಥವಿದೆ. ಅತ್ಯಂತ ಶ್ರೇಷ್ಠ ನಾದವನೇ ಈಶ್ವರನು. ಅಲ್ಲದೆ ಸಂಗೀತ ಶಾಸ್ತ್ರದಲ್ಲಿ,

**"ಸ್ತ್ರೀ ಗವೀಷು ಯಥಾತಿಷ್ಮನ್ ವಿಭಾತಿ ಋಷಭೋ ಮಹಾನ್"**

ಗೋವುಗಳ ಮಧ್ಯದಲ್ಲಿ ದೊಡ್ಡ ಗೂಳಿಯೋಪಾದಿಯಲ್ಲಿ ಸ್ವರಗಳ ಮಧ್ಯದಲ್ಲಿ ಋಷಭ ಸ್ವರವು ಪ್ರಕಾಶಿಸುತ್ತಿದೆ ಎಂದು ಹೇಳಿದೆ. ಇದರಂತೆ ಸೃಷ್ಟಿಕರ್ತನಾದ ಈಶ್ವರನು ಗೋ ಎಂದರೆ ಪ್ರಪಂಚ ಮತ್ತು ನಾದಗಳಲ್ಲಿ ಅಂತರ್ಯಾಮಿಯಾಗಿ ಪ್ರಕಾಶಿಸುತ್ತಿರು ವನು. ಅಲ್ಲದೆ **"ಸ್ವರಗ್ರಾಮೇ ಸಮುತ್ಪನ್ನ ಸ್ವರೋಯಮೃಷಭ ಸ್ತಥಾ"**

ಇತರ ಸ್ವರಗಳಿಗಿಂತಲೂ ಹೃದಯಂಗಮವಾಗಿರುವುದರಿಂದ ಋಷಭ ಸಂಜ್ಞೆಯನ್ನು ಪಡೆಯುವುದೆಂದು ಸಂಗೀತ ಶಾಸ್ತ್ರದಲ್ಲಿ ಹೇಳಿದೆ. ಅಂದರೆ ಈಶ್ವರನು ಆನಂದಮಯ ನಾಗಿ ಕಳಾರೂಪನಾಗಿರುತ್ತಾನೆ. ಇದೇ ಶುದ್ಧಸತ್ವಗುಣದ ಸೋಪಾನವಾಗಿದೆ.

ಛಂದೋವತಿ ಎಂಬ ಬಹು ಪ್ರಾಮುಖ್ಯವಾದ ಶ್ರುತಿಯು ಋಷಭ ಸ್ವರಕ್ಕೆ ಸೇರಿದೆ. ಛಂದಸ್ಸೆಂದರೆ ಶಬ್ದ ಮತ್ತು ಅರ್ಥಸ್ವರೂಪವಾದ ವೇದ. ಅಂದರೆ ನಾದ ಮತ್ತು ಜ್ಞಾನರೂಪವಾದುದೇ ವೇದ. ಚಿತ್ರಗಾರನು ಒಂದು ಚಿತ್ರವನ್ನು ಬರೆಯು ವುದಕ್ಕೆ ಮುಂಚೆ ಆ ಚಿತ್ರದ ರೂಪಿನ ವಿವರವೆಲ್ಲಾ ಅವನ ಮನಸ್ಸಿನಲ್ಲಿ ಭಾವರೂಪ ವಾಗಿರುವುದಷ್ಟೆ ? ಇದರಂತೆ ಸೃಷ್ಟಿ, ಸ್ಥಿತಿ, ಲಯಗಳ ಸರ್ವ ವಿವರವೂ ಭಾವರೂಪ ಜ್ಞಾನವಾಗಿ ಪರಬ್ರಹ್ಮದಲ್ಲಿರುವುದು. ವೇದವು ಪರಬ್ರಹ್ಮ ರೂಪವೇ ಆದುದರಿಂದ ಅಮೃತರೂಪವಾದುದು. ಸೃಷ್ಟಿಕಾಲದಲ್ಲಿ ಪರಬ್ರಹ್ಮದಿಂದ ಉದಯಿಸಿ ಕಳಾರೂಪ ದಲ್ಲಿ ಈಶ್ವರೀ ಶಕ್ತಿಯಲ್ಲಿ ಜ್ಞಾನ ಭಂಡಾರದಂತೆ ಇರುವುದೇ ವೇದಸ್ವರೂಪವಾಗಿರು ವುದು. ಹೀಗಿರುವುದರಿಂದಲೇ ಶ್ರುತಿಯಲ್ಲಿ **"ಸರ್ವವೇದಮಯಂಶಿವಂ"** ಎಂದು ಹೇಳಿದೆ. ಶ್ರೀ ಶಂಕರಭಗವತ್ಪಾದಾಚಾರ್ಯರವರು ಶ್ರೀ ದೇವೀ ನವರತ್ನಮಾಲಿಕಾ ಸ್ತೋತ್ರದಲ್ಲಿ.

**ಆಗಮಪ್ರಣವ ಪೀಠಿಕಾ ಮಮಲ ವರ್ಣಮಂಗಳ ।**
**ಶರೀರಿಣೀಂ ಆಗಮಾವಯವ ಶೋಭಿನೀ ।**
**ಮಖಿಲವೇದ ಸಾರಕೃತ ಶೇಖರೀಂ ॥**
**ಮೂಲಮಂತ್ರ ಮುಖಮಂಡಲಾ ಮುದಿತ ।**
**ನಾದ ಬಿಂದು ನವಯೌವನಾಂ ಮಾತೃಕಾಂ ।**
**ತ್ರಿಪುರಸುಂದರೀಂ ಮನಸಿ ಭಾವಯಾಮಿ ಪರದೇವತಾಂ ॥**

**ತಾತ್ಪರ್ಯ** :—ಓಂಕಾರದ ಅಗ್ರಭಾಗದಲ್ಲಿ ವೇದವೆಂದರೆ ಜ್ಞಾನಮಯವಾಗಿರುವ ಕಳಾದಲ್ಲಿ' ನೆಲಸಿರುವವಳಾಗಿಯೂ, ಪರಿಶುದ್ಧವಾದ ಆನಂದಮಯವಾದ ಮಂಗಳ ರೂಪವಾದ ಶರೀರವುಳ್ಳವಳಾಗಿಯೂ, ವೇದವೇ ಅಂದರೆ ಜ್ಞಾನ ಭಂಡಾರವೇ ಅವಯವ ವಾಗಿ ಶೋಭಿಸುತ್ತಿರುವವಳಾಗಿಯೂ, ವೇದಗಳ ಸಾರಭೂತವೇ ಕಿರೀಟವುಳ್ಳವ ಳಾಗಿಯೂ, ಮೂಲಮಂತ್ರ ರೂಪವಾಗಿ ಪರಬ್ರಹ್ಮವೇ ಆಗಿರುವ ಓಂಕಾರ ಅಥವಾ ಹ್ರೀಂಕಾರ ಮಂತ್ರವೇ ಮುಖ ಮಂಡಲವಾಗಿರುವವಳಾಗಿಯೂ ಇದರಿಂದ ಉದಯ ವಾದ ಬಹುಸ್ಫುಟವಾದ ನಾದ ಮತ್ತು ಬಿಂದುವೆಂದರೆ ಜಗದ್ರೂಪಳಾಗಿಯೂ ಇರುವ ಜಗಜ್ಜನನಿಯಾದ ಮಹಾತ್ರಿಪುರಸುಂದರೀ ಪರದೇವತೆಯನ್ನು ಸ್ಮರಿಸುತ್ತೇನೆ, ಎಂದು ಹೇಳಿದೆ.

ಮೇಲೆ ತಿಳಿಸಿರುವ ಋಷಭಸ್ವರದ ವಿವರಣೆಯನ್ನು ಮತ್ತು ಮೇಲಿನ ಶ್ಲೋಕದ ಅರ್ಥವನ್ನು ಸರಿಯಾಗಿ ತಿಳಿದುಕೊಂಡರೆ ಈಶ್ವರಿಯೊಡಗೂಡಿದ ಈಶ್ವರನು ಬಿಂದು ನಾದ ಕಳಾರೂಪವಾದ ಸಗುಣ ಬ್ರಹ್ಮನೆನಿಸುವ ಓಂಕಾರ ಸ್ವರೂಪನಾಗಿರುತ್ತಾನೆಂಬುವುದು ಗೊತ್ತಾಗುವುದು. ಪರಬ್ರಹ್ಮ ಒಂದೇ ಇದ್ದ ಕಾಲದಲ್ಲಿ ಈಶ್ವರನೂ ಇರುವುದಿಲ್ಲ. ವೇದವೂ ಇರುವುದಿಲ್ಲ. ಎಲ್ಲಾ ಪರಬ್ರಹ್ಮ ಸ್ವರೂಪವಾಗಿರುವುದು. **"ಓಂಕಾರ ಪ್ರಭಾವಾವೇದಾ"** ಎಂಬ ಧ್ಯಾನಬಿಂದೂಪನಿಷತ್ ಪ್ರಮಾಣದಂತೆ ಸೃಷ್ಟಿಕಾಲದಲ್ಲಿ ಪರಬ್ರಹ್ಮನಿಂದ ವೇದಗಳು ಉದಯಿಸುವುವು. ಮಹಾಪ್ರಳಯ ಕಾಲದಲ್ಲಿ ಪುನಃ ಪರಬ್ರಹ್ಮ ಸ್ವರೂಪವೇ ಆಗುವುದು. ಆದುದರಿಂದ ವೇದವು ಅಮೃತಸ್ವರೂಪವೆಂದು "ಅಮೃತಾತ್ ಸಂಬಭೂವ" ಎಂದು ಉಪನಿಷತ್ ಮಂತ್ರದಲ್ಲೂ ಮತ್ತು ಭಾಷ್ಯದಲ್ಲೂ ಹೇಳಿದೆ.

## ಪ್ರಜ್ಞಾಶಕ್ತಿಯನ್ನು ಅನುಗ್ರಹಿಸಲು ಓಂಕಾರ ಸ್ವರೂಪಿಯಾದ ಈಶ್ವರನಲ್ಲಿ ಪ್ರಾರ್ಥನೆ

**ಸ ಮೇನ್ದ್ರೋ ಮೇಧಯಾ ಸ್ಪೃಣೋತು ।**
**ಅಮೃತಸ್ಯ ದೇವ ಧಾರಣೋ ಭೂಯಾಸಮ್ ।**

**ತಾತ್ಪರ್ಯ** :—ಇಂದ್ರನೆಂದರೆ ಪರಮೈಶ್ವರ್ಯ ಶಾಲಿಯಾದ ಮತ್ತು ಸರ್ವ ಇಷ್ಟಾರ್ಥಗಳನ್ನೂ ಅನುಗ್ರಹಿಸಲು ಶಕ್ತಿಯುಳ್ಳ ಓಂಕಾರಸ್ವರೂಪನಾದ ಈಶ್ವರನು ಅನುಗ್ರಹಿಸಿ ಮೇಧಾಶಕ್ತಿಯೆಂದರೆ ಬ್ರಹ್ಮಜ್ಞಾನವನ್ನು ಹೊಂದುವ ಬುದ್ಧಿಶಕ್ತಿಯಾದ ಪ್ರಜ್ಞೆಯಿಂದ ನನ್ನನ್ನು ಸಂತೋಷಗೊಳಿಸಲಿ ಹೇ ದೇವ! ಅಮೃತ ಸ್ವರೂಪವಾದ ಪರಮಾತ್ಮ ಸಾಕ್ಷಾತ್ಕಾರದ ಸ್ಥಿತಿಯನ್ನು ಧರಿಸಲು ಅನುಷ್ಠಾನದ ಬಲವನ್ನು ಹೊಂದುವಂತೆ ಅನುಗ್ರಹಿಸು. ಪ್ರಥಮದಲ್ಲಿ ಮೇಧಾಶಕ್ತಿಯನ್ನು ಹೊಂದಲು ಪ್ರಾರ್ಥಿಸಿ ಅನಂತರ ಅನುಷ್ಠಾನದಿಂದ ಧಾರಣಾಶಕ್ತಿಯುಂಟಾಗುವಂತೆ ಪ್ರಾರ್ಥಿಸಿದೆ.

## ಆತ್ಮಜ್ಞಾನವನ್ನು ಪಡೆಯಲು ದೇಹೇಂದ್ರಿಯಗಳ ಅರ್ಹತೆಗಾಗಿ ಓಂಕಾರ ಸ್ವರೂಪಿಯಾದ ಈಶ್ವರನಲ್ಲಿ ಪ್ರಾರ್ಥನೆ

**ಶರೀರಂ ಮೇ ವಿಚರ್ಷಣಮ್ । ಜಿಹ್ವಾ ಮೇ ಮಧುಮತ್ತಮಾ ।**
**ಕರ್ಣಾಭ್ಯಾಂ ಭೂರಿ ವಿಶ್ರುವಮ್ ।**

ಆತ್ಮಜ್ಞಾನವನ್ನು ಹೊಂದಲು ನನ್ನ ಶರೀರವು ಯೋಗ್ಯವಾದುದಾಗಲಿ. ನನ್ನ ನಾಲಿಗೆಯು ಅತಿಶಯವಾದ ಮಧುರ ಭಾಷಣವನ್ನು ನುಡಿಯುವಂತಾಗಲಿ. ನನ್ನ

ಕರ್ಣಗಳು ಹೆಚ್ಚಾಗಿ ಕೇಳುವ ಅರ್ಹತೆಯುಂಟಾಗಲಿ. ಎಂದು ಓಂಕಾರ ಸ್ವರೂಪ ನಾದ ಈಶ್ವರನನ್ನು ಪ್ರಾರ್ಥಿಸುವಿಕೆ. ಅಂದರೆ ಹಿಂದಿನ ಮಂತ್ರದಲ್ಲಿ ಕೇಳಿಕೊಂಡಿರುವ ಪ್ರಜ್ಞಾಶಕ್ತಿ ಮತ್ತು ಅನುಷ್ಠಾನದ ಶಕ್ತಿಗಳಿಗೆ ದೇಹೇಂದ್ರಿಯಗಳ ಅರ್ಹತೆಯೂ ಬೇಕೆಂಬುದನ್ನು ಈ ಮಂತ್ರವು ಪ್ರತಿಪಾದಿಸುವುದು.

## ಪರಬ್ರಹ್ಮ ಸಾಕ್ಷಾತ್ಕಾರವನ್ನು ಅನುಗ್ರಹಿಸೆಂದು ಓಂಕಾರ ಸ್ವರೂಪನಾದ ಈಶ್ವರನಲ್ಲಿ ಪ್ರಾರ್ಥನೆ

**ಬ್ರಹ್ಮಣಃ । ಕೋಶೋಽಸಿ ಮೇಧಯಾ**
**ಪಿಹಿತಃ । ಶ್ರುತಂ ಮೇ ಗೋಪಾಯ ।**

"**ಬ್ರಹ್ಮಣಃ ಕೋಶೋಽಸಿ**" ಎಂಬ ಮಂತ್ರಕ್ಕೆ ಕತ್ತಿಯ ಮೇಲಿರುವ ಒರೆಯು ಕತ್ತಿಯನ್ನು ಹೇಗೆ ಮುಚ್ಚಿರುವುದೋ ಹಾಗೆ ನೀನು ಪರಬ್ರಹ್ಮವನ್ನು ಮುಚ್ಚಿಕೊಂಡಿರುವೆ ಮತ್ತು ಆ ಪರಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಳ್ಳುವುದಕ್ಕೆ ನೀನು ಆಧಾರವಾಗಿಯೂ ಇರುತ್ತೀಯೆ. ಅಲ್ಲದೆ ನೀನು ಪರಬ್ರಹ್ಮದ ಸಗುಣ ಮೂರ್ತಿಯು ಎಂದು ಭಾಷ್ಯದಲ್ಲಿ ಹೇಳಿದೆ.

ಮೇಲಿನ ಭಾಷ್ಯದ ತತ್ವವೇನೆಂದರೆ—ಬಿಂದು, ನಾದ ಕಳಾರೂಪವಾದ ಸಗುಣತ್ವವು ಓಂಕಾರದಲ್ಲಿ ಇರುವುದರಿಂದ ಈಶ್ವರನು ಸಗುಣಮೂರ್ತಿಯು. ಈ ಸಗುಣತ್ವವು ಪರಬ್ರಹ್ಮವನ್ನು ಆವರಿಸಿಕೊಂಡಿದೆ. ಪರಬ್ರಹ್ಮತ್ವವನ್ನು ಹೊಂದಲು ಬಿಂದು, ನಾದ, ಕಳಾ ಮೂಲಕವಾಗಿಯೇ ಹೋಗಬೇಕಾಗಿ ಇರುವುದರಿಂದ ಬಿಂದುನಾದ ಕಳಾರೂಪವಾದ ಈಶ್ವರನೇ ಪರಬ್ರಹ್ಮವನ್ನು ಹೊಂದಲು ಆಧಾರವಾಗಿ ಇರುವನು. ಅಂದರೆ, ಪರಬ್ರಹ್ಮತ್ವವನ್ನು ಹೊಂದಲು ಈ ದಾರಿಯಲ್ಲದೆ ಬೇರೆ ದಾರಿಯೇ ಇರುವುದಿಲ್ಲ. ಮೇಲಿನ ತತ್ವ ಸಮರ್ಥನೆಗೆ,

**"ಬಿಂದು ನಾದ ಕಳಾತೀತಂ ಯಸ್ತಂವೇದ ಸವೇದವಿತ್"**

ಎಂಬ ಶ್ರುತಿ ಪ್ರಮಾಣವು ಇರುವುದು. ಅಲ್ಲದೆ ಸಗುಣರಾದ ಚತುರ್ಮುಖ ಬ್ರಹ್ಮ, ವಿಷ್ಣು, ರುದ್ರರು ಬಿಂದು, ನಾದ, ಕಳಾ ಸ್ವರೂಪರೆಂದು ಕೆಳಗಿನ ಯೋಗ ಶಿಖೋಪನಿಷತ್ತಿನ ವಾಕ್ಯವು ತಿಳಿಸುವುದು.

**"ಬಿಂದುನಾದ ಕಲಾ ಬ್ರಹ್ಮ ವಿಷ್ಣು ಬ್ರಹ್ಮೇಶ ದೇವತಾಃ"**

**ಮೇಧಯಾ ಪಿಹಿತಃ** ಎಂಬ ಮಂತ್ರಕ್ಕೆ ಲೌಕಿಕ ಪ್ರಜ್ಞೆಯಿಂದ ನನ್ನನ್ನು ಮುಚ್ಚಿರುತ್ತೀಯಾದ್ದರಿಂದ ನೀನು ನನಗೆ ಮರೆಯಾಗಿರುತ್ತೀಯೆ. ಲೌಕೀಕ ಪ್ರಜ್ಞೆ

ಯೆಂದರೆ– ದೇಹ ಮತ್ತು ಲೋಕ ವ್ಯವಹಾರದ ಜ್ಞಾನ. ಲೋಕ ವ್ಯವಹಾರದ ಜ್ಞಾನವೇ ಅಜ್ಞಾನ ಅಥವಾ ಅವಿದ್ಯೆಯೆನಿಸಿಕೊಳ್ಳುವುದು. ಈ ಅಜ್ಞಾನವು ಈಶ್ವರ ಸ್ವರೂಪವನ್ನು ಆವರಿಸಿ ಮುಚ್ಚಿಕೊಂಡಿರುವುದು.

**ಶ್ರುತಂ ಮೇ ಗೋಪಾಯ** ಎಂಬ ಮಂತ್ರಕ್ಕೆ ಎಲೈ ಓಂಕಾರ ಸ್ವರೂಪನಾದ ಈಶ್ವರನೇ ! ನಿನ್ನನ್ನು ಮುಚ್ಚಿಕೊಂಡಿರುವ ನನ್ನಲ್ಲಿರುವ ಅಜ್ಞಾನವು ನಿವರ್ತಿಯಾಗುವಂತೆಯೂ, ನಿನ್ನ ರೂಪಿನ ಮೂಲಕ ಪರಬ್ರಹ್ಮಸಾಕ್ಷಾತ್ಕಾರವಾಗುವಂತೆಯೂ, ನಾನು ಕೇಳಿಕೊಂಡ ಪ್ರಜ್ಞಾಶಕ್ತಿಯನ್ನೂ ಅನುಷ್ಠಾನದ ಧಾರಣಾಶಕ್ತಿಯನ್ನೂ ಅನುಗ್ರಹಿಸಿ ಕೊಟ್ಟು ನಾನು ಪರಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವವರಿಗೂ ಕರುಣೆಯಿಂದ ನನ್ನನ್ನು ರಕ್ಷಿಸು ಎಂದು ಗುರುಕುಲವಾಸಕ್ಕೆ ಬಂದಿರುವ ಶಿಷ್ಯನು ಪರಮಭಕ್ತಿಯಿಂದ ಓಂಕಾರ ಸ್ವರೂಪನಾದ ಈಶ್ವರನನ್ನು ಪ್ರಾರ್ಥಿಸುವಿಕೆಯಾಗಿದೆ.

ಈ ಮಂತ್ರಗಳು ಮೇಧಾಕಾಮನೆಂದರೆ ಮೋಕ್ಷಾಭಿಲಾಷಿಯಾದ ಶಿಷ್ಯನು ಜಪ ಮಾಡುವುದಕ್ಕೋಸ್ಕರ ಹೇಳಿದವುಗಳಾಗಿವೆಯೆಂದು ಭಾಷ್ಯದಲ್ಲಿ ಬರೆದಿದೆ. ಅಂದರೆ, ಮೋಕ್ಷಾಭಿಲಾಷೆಯು ಸರ್ವದಾ ಮೋಕ್ಷೆಯನ್ನು ಹೆಚ್ಚಿಸಿಕೊಳ್ಳುತ್ತಾ ಅದರ ಹಂಬಲಿನಲ್ಲಿಯೆ ಇರಬೇಕೆಂಬುದನ್ನೂ ಮತ್ತು ಅಜ್ಞಾನವನ್ನು ಪರಿಹರಿಸಿ ಪರಬ್ರಹ್ಮಸಾಕ್ಷಾತ್ಕಾರಕ್ಕೆ ಅನುಗ್ರಹಿಸಿ ಸಹಾಯ ಮಾಡೆಂದು ಓಂಕಾರ ಸ್ವರೂಪನಾದ ಈಶ್ವರನನ್ನು ಸರ್ವದಾ ಪ್ರಾರ್ಥಿಸುತ್ತಿರಬೇಕೆಂಬುದನ್ನೂ ಭಾಷ್ಯದ ವಾಕ್ಯವು ಸೂಚಿಸುವುದು.

### ಧನಧಾನ್ಯ ಮುಂತಾದ ಸಂಪತ್ತನ್ನು ಅನುಗ್ರಹಿಸೆಂದು ಓಂಕಾರ ಸ್ವರೂಪಿಯಾದ ಈಶ್ವರನಲ್ಲಿ ಪ್ರಾರ್ಥನೆ.

**ಆವಹನ್ತಿ ವಿತನ್ವಾನಾ । ಕುರ್ವಾಣಾ ಚೀರಮಾತ್ಮನಃ ।**
**ವಾಸಾಗ್ಂಸಿ ಮಮ ಗಾವಶ್ಚ । ಅನ್ನಪಾನೇ ಚ ಸರ್ವದಾ ।**
**ತತೋ ಮೇ ಶ್ರಿಯಮಾವಹ । ಲೋಮಶಾಂ ಪಶುಭಿಃ ಸಹ ಸ್ವಾಹಾ ।**

ಶ್ರೀಕಾಮನಾದವನಿಗೆ ಹೋಮ ಮಾಡುವುದಕ್ಕೋಸ್ಕರ ಈಗ ಮಂತ್ರಗಳನ್ನು ಹೇಳಲಾಗುತ್ತಿದೆ. ಶ್ರೀಕಾಮನೆಂದರೆ ದೇಹಪೋಷಣೆಗೆ ಬೇಕಾದ ಆಹಾರ ವಸ್ತ್ರ ಮುಂತಾದ ಸಂಪತ್ತನ್ನು ಅಪೇಕ್ಷಿಸುವವನು ಶ್ರೀಕಾಮನೆನಿಸುವನು. ಮೋಕ್ಷಾಭಿಲಾಷೆಯಲ್ಲಿ ಇರುವವನು ಕೂಡ ದೇಹವನ್ನು ಪೋಷಿಸಬೇಕಾಗುವುದು. ಅಲ್ಲದೆ ತನ್ನ ಪಾಪಗಳನ್ನು ಪರಿಹರಿಸಿಕೊಳ್ಳಲು ಈಶ್ವರಾರಾಧನರೂಪವಾದ ಕರ್ಮಗಳನ್ನು ಮಾಡಬೇಕಾಗುವುದು. ದೇಹ ಪೋಷಣೆ ಮತ್ತು ಕರ್ಮ ಮಾಡುವುದಕ್ಕೆ ವಸ್ತ್ರ, ಗೋವುಗಳು, ಧನ, ಧಾನ್ಯ ಮುಂತಾದ ಸಲಕರಣೆಗಳೆಲ್ಲಾ ಬೇಕಾಗುವುದು.

ಪೋಷಿಸುವ ಸಲಕರಣೆಗಳನ್ನೆಲ್ಲಾ ಶ್ರೀ ಸ್ವರೂಪವಾದ ಶ್ರೀಮಹಾಲಕ್ಷ್ಮಿಯ ಅನುಗ್ರಹದಿಂದ ಪಡೆಯಬೇಕಾಗಿದೆ. ಗುರುಕುಲವಾಸದಲ್ಲಿರುವ ಶಿಷ್ಯನು ಪೋಷಿಸುವ ಸಲಕರಣೆಗಳನ್ನೆಲ್ಲಾ ಶ್ರೀಮಹಾಲಕ್ಷ್ಮಿಯ ಮೂಲಕ ಕೊಡಿಸಿಕೊಡೆಂದು ಈ ಮಂತ್ರದಿಂದ ಯಜ್ಞೇಶ್ವರನಿಗೆ ಹೋಮ ಮಾಡುವುದರ ಮೂಲಕ ಓಂಕಾರಸ್ವರೂಪಿಯಾದ ಈಶ್ವರನನ್ನು ಪ್ರಾರ್ಥಿಸುವಿಕೆಯ ತತ್ವವಾಗಿದೆ. ಗುರುಕುಲವಾಸದಲ್ಲಿರುವ ಶಿಷ್ಯನು ಬ್ರಹ್ಮಚರ್ಯಾಶ್ರಮದಲ್ಲಿ ಇರುವುದರಿಂದ ಪ್ರತಿನಿತ್ಯವೂ ಅಗ್ನಿಕಾರ್ಯವನ್ನು ಮಾಡುವನೆಂಬುದನ್ನು ಮಂತ್ರವು ಸ್ಪಷ್ಟಪಡಿಸುವುದು.

ಗುರುಕುಲವಾಸದಲ್ಲಿರುವ ಶಿಷ್ಯನು ಯಾವ ಕಾಲದಲ್ಲಿ ಧನಧಾನ್ಯಸಂಪತ್ತನ್ನು ಶ್ರೀ ಮಹಾಲಕ್ಷ್ಮಿಯಿಂದ ಕೊಡಿಸೆಂದು ಓಂಕಾರಸ್ವರೂಪಿಯಾದ ಈಶ್ವರನನ್ನು ಕೇಳಿಕೊಂಡಿರುವನೆಂದರೆ – ಮೇಧಾಶಕ್ತಿಯನ್ನೆಂದರೆ ಬುದ್ಧಿಯ ವಿವೇಚನಾಶಕ್ತಿಯನ್ನು ತನಗೆ ಅನುಗ್ರಹಿಸಿಕೊಟ್ಟ ಅನಂತರ ಧನಧಾನ್ಯಸಂಪತ್ತನ್ನು ಕೊಡಿಸೆಂದು ಪ್ರಾರ್ಥಿಸಿರುವನು. ಕಾರಣವೇನೆಂದರೆ, ಸರಿಯಾದ ವಿವೇಚನಾಶಕ್ತಿ ಇಲ್ಲದವನಿಗೆ ಸಂಪತ್ತು ಅನರ್ಥವನ್ನೇ ಉಂಟುಮಾಡುವುದು. ಸರಿಯಾದ ವಿವೇಚನಾಶಕ್ತಿಯೆಂದರೆ ಮನುಷ್ಯನಿಗೆ ಅಸ್ತಿಭಾರದಂತೆ ಪ್ರಥಮದಲ್ಲಿ ಮೋಕ್ಷದ ಗುರಿ ಇರಬೇಕು. ಈ ಮೋಕ್ಷದ ಗುರಿಗೆ ಅನುಸಾರವಾದ ಪ್ರಾಪಂಚಿಕದ ನಡೆವಳಿಕೆಗಳಿರುವುವುಗಳನ್ನೇ ಧರ್ಮವೆಂದು ಕರೆಯಲ್ಪಡುವುದು. ಮೋಕ್ಷದಗುರಿಗೂ, ಧರ್ಮಮಾರ್ಗಕ್ಕೂ ಅನುಸಾರವಾದ ಅರ್ಥವೆಂದರೆ ಧನವನ್ನು ಸಂಪಾದಿಸಬೇಕು. ಸಂಪಾದಿಸಿದ ಧನವನ್ನು ತನ್ನ ಭೋಗಕ್ಕೋಸ್ಕರ ಖರ್ಚುಮಾಡುವಿಕೆಯು, ಮೋಕ್ಷ, ಧರ್ಮ, ತನ್ನ ಸಂಪಾದನೆಗೆ ತಕ್ಕಂತೆ ಇರಬೇಕು.

ಇಂತಹ ಬುದ್ಧಿಯ ವಿವೇಚನಾಶಕ್ತಿಯನ್ನು ಅನುಗ್ರಹಿಸಿಕೊಟ್ಟು ಅನಂತರವೇ ಧನಧಾನ್ಯಸಂಪತ್ತನ್ನು ಅನುಗ್ರಹಿಸಿ ಕೊಡೆಂದು ಗುರುಕುಲವಾಸದಲ್ಲಿರುವ ಶಿಷ್ಯನು ಓಂಕಾರಸ್ವರೂಪಿಯಾದ ಈಶ್ವರನನ್ನು ಪ್ರಾರ್ಥಿಸಿಕೊಂಡಿರುವನು. ಬ್ರಹ್ಮಜ್ಞಾನವನ್ನು ಹೊಂದುವ ಬುದ್ಧಿಶಕ್ತಿ, ಸಾಧನಾನುಷ್ಠಾನದ ಬಲ, ದೇಹೇಂದ್ರಿಯಗಳ ಅರ್ಹತೆ ಬ್ರಹ್ಮಸಾಕ್ಷಾತ್ಕಾರಕ್ಕೆ ಪ್ರಾರ್ಥನೆ, ಕೊನೆಯಲ್ಲಿ ಸಂಪತ್ತಿನ ಅಪೇಕ್ಷೆಯ ಪ್ರಾರ್ಥನೆಗಳು ಕ್ರಮವಾಗಿ ಬಂದಿರುವುವು. ಮನುಷ್ಯರೆಲ್ಲರೂ ಇದನ್ನು ಅಗತ್ಯವಾಗಿ ತಿಳಿದು ಆಚರಿಸಬೇಕಾದುದಾಗಿದೆ.

### ಆಚಾರ್ಯನು ಓಂಕಾರ ಸ್ವರೂಪಿಯಾದ ಈಶ್ವರನ ಪ್ರಾರ್ಥನೆಯೊಡನೆ ಹೋಮಮಾಡುವಿಕೆ

**ಆಮಾಯನ್ತು ಬ್ರಹ್ಮಚಾರಿಣಃ ಸ್ವಾಹಾ । ವಿಮಾಯನ್ತು ಬ್ರಹ್ಮಚಾರಿಣಃ ಸ್ವಾಹಾ । ಪ್ರಮಾಯನ್ತು ಬ್ರಹ್ಮಚಾರಿಣಃ**

ಸ್ವಾಹಾ । ದಮಾಯನ್ತು ಬ್ರಹ್ಮಚಾರಿಣಃ ಸ್ವಾಹಾ ।
ಶಮಾಯನ್ತು ಬ್ರಹ್ಮಚಾರಿಣಃ ಸ್ವಾಹಾ । ಯಶೋ ಜನೇಽ
ಸಾನಿ ಸ್ವಾಹಾ । ಶ್ರೇಯಾನ್ ವಸ್ಯಸೋಽಸಾನಿ ಸ್ವಾಹಾ ।

ಎಲೈ ಓಂಕಾರಸ್ವರೂಪನಾದ ಈಶ್ವರನೆ! ಬ್ರಹ್ಮಚಾರಿಗಳು ಬಂದು ನನ್ನನ್ನು ಸೇರಲಿ ಸ್ವಾಹಾ. ಬ್ರಹ್ಮಚಾರಿಗಳು ಬಲಿಷ್ಠರಾಗಲಿ. ಸ್ವಾಹಾ. ಬ್ರಹ್ಮಚಾರಿಗಳು ಅಧಿಕವಾಗಲಿ. ಸ್ವಾಹಾ. ಬ್ರಹ್ಮಚಾರಿಗಳು ಇಂದ್ರಿಯನಿಗ್ರಹಶಕ್ತಿಯುಳ್ಳವರಾಗಿರಲಿ. ಸ್ವಾಹಾ. ಬ್ರಹ್ಮಚಾರಿಗಳು ಶಾಂತಿಯುಕ್ತರಾಗಲಿ. ಸ್ವಾಹಾ. ಜನರಲ್ಲಿ ನನಗೆ ಯಶಸ್ಸು ದೊರೆಯಲಿ ಸ್ವಾಹಾ. ನಾನು ಭಾಗ್ಯವಂತನೂ ಶ್ರೇಯಸ್ಸುಳ್ಳವನೂ ಆಗಲಿ. ಸ್ವಾಹಾ.

ಎಲೈ ಓಂಕಾರ ಸ್ವರೂಪನಾದ ಭಗವಂತನೆ! ನಾನು ನಿನ್ನೊಳಗೆ ಸೇರಿ ನಿನ್ನ ಸ್ವರೂಪವೇ ಆಗುವಂತೆಯೂ ನೀನೂ ಕೂಡಾ ನನ್ನನ್ನು ಸೇರುವಂತೆಯೂ ನಮ್ಮಿಬ್ಬರಿಗೂ ಏಕತ್ವವುಂಟಾಗುವಂತೆಯೂ ಅನುಗ್ರಹಿಸು. ಅಲ್ಲದೆ ಎಲೈ ಪೂಜ್ಯನೆ! ಸಹಸ್ರ ಶಾಖೆಗಳು ಬಹುಶಾಖಾ ಬೇಧಗಳುಳ್ಳ ಆ ನಿನ್ನಲ್ಲಿ ಪಾಪಗಳನ್ನೆಲ್ಲಾ ಪರಿಹರಿಸಿಕೊಂಡು ಶುದ್ಧನಾಗುತ್ತೇನೆ. ಆಚಾರ್ಯನು ಓಂಕಾರಸ್ವರೂಪದ ಸಾಯುಜ್ಯಕ್ಕಾಗಿ ಪ್ರಾರ್ಥಿಸಿರುವನು.

ತಂ ತ್ವಾ ಭಗ ಪ್ರವಿಶಾನಿ ಸ್ವಾಹಾ ।
ಸ ಮಾ ಭಗ ಪ್ರವಿಶ ಸ್ವಾಹಾ ।
ತಸ್ಮಿನ್ ಸಹಸ್ರಶಾಖೇ । ನಿಭಗಾಹಂ
ತ್ವಯಿ ಮೃಜೇ ಸ್ವಾಹಾ ।

ಎಲೈ ಭಗವಂತನೆ! ಬ್ರಹ್ಮಚಾರಿಯುನ್ನು ಅನುಗ್ರಹಿಸು. ಸ್ವಾಹಾ. ಹೆ ಸುಭಾಗ್ಯವೆ! ನನ್ನನ್ನು ಅನುಗ್ರಹಿಸು. ಸ್ವಾಹಾ. ಹೆ ತೇಜಸ್ವಿಯೆ! ನಿನ್ನ ಅನಂತವಾದ ಕಿರಣಗಳಲ್ಲಿ ನಾನು ಸ್ನಾನಮಾಡಿ ಶುದ್ಧನಾಗುವೆನು. ಸ್ವಾಹಾ.

ಯಥಾಪಃ ಪ್ರವತಾ ಯನ್ತಿ । ಯಥಾ ಮಾಸಾ
ಅಹರ್ಜರಮ್ । ಏವಂ ಮಾಂ ಬ್ರಹ್ಮಚಾರಿಣಃ ।
ಧಾತರಾಯನ್ತು ಸರ್ವತಃ ಸ್ವಾಹಾ । ಪ್ರತಿವೇಶೋಽಸಿ
ಪ್ರ ಮಾ ಪಾಹಿ ಪ್ರ ಮಾ ಪದ್ಯಸ್ವ ॥

ಎಲೈ ಓಂಕಾರರೂಪನಾದ ಧಾತನೆ! ಹೇಗೆ ನೀರು ತಗ್ಗಾದ ಪ್ರದೇಶದ ಮೂಲಕ ಪ್ರವಹಿಸುವುದೊ, ಹೇಗೆ ಮಾಸಗಳು ಸಂವತ್ಸರವನ್ನು ಸೇರುವುದೊ

ಹಾಗೆಯೆ ಬ್ರಹ್ಮಚಾರಿಗಳು ಎಲ್ಲಾ ಕಡೆಯಿಂದಲೂ ಬಂದು ನನ್ನನ್ನು ಸೇರಲಿ. ಆಯಾಸವನ್ನು ಪರಿಹರಿಸಿಕೊಳ್ಳುವ ಶಾಂತವಾದ ಸ್ಥಾನದಂತೆ ನಿನ್ನ ಸ್ಥಾನವು ನಿನ್ನ ಮಹತ್ತನ್ನು ವಿಚಾರದಿಂದ ತಿಳಿದಿರುವವರಿಗೆ ಸರ್ವ ದುಃಖವನ್ನೂ ಪರಿಹರಿಸಿ ಆನಂದಾ ಮೃತದ ಸವಿಯನ್ನು ಪಾನಮಾಡುವ ಸ್ಥಾನವಾಗಿರುವುದು. ಆದುದರಿಂದ ಎಲೈ ಆನಂದಮೂರ್ತಿಯೇ ! ಪ್ರಸನ್ನನಾಗಿ ನಿನ್ನ ಸ್ವರೂಪವನ್ನು ತೋರಿಸುವವನಾಗು. ಅಲ್ಲದೆ ಪಾದರಸವು ಹತ್ತಿಕೊಂಡ ಲೋಹವು ತನ್ಮಯವಾಗುವಂತೆ ನನ್ನನ್ನು ನಿನ್ನ ಸ್ವರೂಪದವನೇ ಆಗಿಬಿಡುವಂತೆ ಕರುಣೆಯಿಂದ ಅನುಗ್ರಹಿಸು.

# ೪ನೇ ಪ್ರಕರಣ

## ಓಂಕಾರ ಸಾಕ್ಷಾತ್ಕಾರಕ್ಕೆ ಸಲಕರಣೆ.

೪ ನೇ ಪ್ರಕರಣದಲ್ಲಿರುವ ವಿಷಯಗಳು :-[ಮಹಾಚಮಸ್ಯನು ಭೂಃ, ಭುವಃ, ಸುವಃ, 'ಮಹಃ' ಎಂಬ ನಾಲಕ್ಕು ವ್ಯಾಹೃತಿಗಳಲ್ಲಿ 'ಮಹಃ' ಎಂಬು ದನ್ನು ಪರಬ್ರಹ್ಮನಿಗೆ ಅನ್ವಯಿಸಿ ಉಳಿದ ಮೂರು ವ್ಯಾಹೃತಿಗಳು 'ಮಹಃ' ಎಂಬುದಕ್ಕೆ ಅಂಗಗಳೆಂದು ಹೇಳಿರುವನು. ಅಲ್ಲದೆ ಈ ನಾಲಕ್ಕೂ, ನಾಲಕ್ಕು ವಿಧಗಳಾಗಿವೆಯೆಂದು ಹೇಳಿರುವನು. ಇವುಗಳ ವಿಂಗಡನೆಯನ್ನು ಬರೆದು ಗೂಢವಾಗಿರುವ ತತ್ವಗಳನ್ನು ಹೊರಸೂಸಿ ಬರೆದಿರುವುದು. ಮುಖ್ಯವಾಗಿ ಮುಮುಕ್ಷುವು ಓಂಕಾರಸಾಕ್ಷಾತ್ಕಾರವನ್ನು ಹೊಂದಲು ಜ್ಞಾನ, ವೈರಾಗ್ಯ, ಮತ್ತು ಯೋಗ ವಿಚಾರಗಳನ್ನೂ, ಅನುಷ್ಠಾನದಲ್ಲಿ ಪ್ರಥಮದಲ್ಲಿ ತನ್ನಲ್ಲಿರುವ ಆದಿತ್ಯನ ಸೋಪಾನವನ್ನು ಸೇರಿ ಅನಂತರ ಆದಿತ್ಯಸೋಪಾನದಿಂದ ಚಂದ್ರ ಸೋಪಾನಕ್ಕೆ ಹತ್ತಿ ಅಲ್ಲಿಂದ ಓಂಕಾರ ಸಾಕ್ಷಾತ್ಕಾರವನ್ನು ಪಡೆಯಬೇಕೆಂಬು ದನ್ನೂ, ದೇಹಪತನಕಾಲದಲ್ಲಿ ಪರಬ್ರಹ್ಮನೇ ಆಗುವನೆಂಬುದನ್ನೂ, ತಿಳಿಸು ವುದು. ಗುರುವಿನಿಂದ ಶ್ರವಣದ ಮೂಲಕ ತಿಳಿದುಕೊಳ್ಳುವಿಕೆಯೆ ಈ ಮಂತ್ರದ ಅಭಿಪ್ರಾಯವಾಗಿದೆ. ಮುಮುಕ್ಷುವು ತಾನು ಅನುಷ್ಠಿಸಿ ಸ್ವಾನುಭವಕ್ಕೆ ತಂದುಕೊಳ್ಳುವಿಕೆಯು ಮುಂದಿನ ಮಂತ್ರದಲ್ಲಿ ಬರುವುದು.]

ಭೂರ್ಭುವಃ ಸುವರಿತಿ ವಾ ಏತಾಸ್ತಿಸ್ರೋ ವ್ಯಾಹೃತಯಃ ।
ತಾ ಸಾಮು ಹ ಸ್ಮೈತಾಂ ಚತುರ್ಥೀಮ್ । ಮಹಾಚಮಸ್ಯಃ ।
ಪ್ರವೇದಯತೇ । ಮಹ ಇತಿ । ತದ್ ಬ್ರಹ್ಮ । ಸ ಆತ್ಮಾ ।
ಅಙ್ಗಾನ್ಯನ್ಯಾ ದೇವತಾಃ । ಭೂರಿತಿ ವಾ ಅಯಂ ಲೋಕಃ ।
ಭುವ ಇತ್ಯನ್ತರಿಕ್ಷಮ್ । ಸುವರಿತ್ಯಸೌ ಲೋಕಃ । ಮಹ
ಇತ್ಯಾದಿತ್ಯಃ । ಆದಿತ್ಯೇನ ವಾವ ಸರ್ವೇ ಲೋಕಾ ಮಹೀ
ಯನ್ತೇ । ಭೂರಿತಿ ವಾ ಅಗ್ನಿಃ । ಭುವ ಇತಿ ವಾಯುಃ । ಸುವ
ರಿತ್ಯಾದಿತ್ಯಃ । ಮಹ ಇತಿ ಚನ್ದ್ರಮಾಃ । ಚನ್ದ್ರಮಸಾ ವಾವ
ಸರ್ವಾಣಿ ಜ್ಯೋತೀಗ್ಂಷಿ ಮಹೀಯನ್ತೇ । ಭೂರಿತಿ ವಾ
ಋಚಃ । ಭುವಃ ಇತಿ ಸಾಮಾನಿ । ಸುವರಿತಿ ಯಜೂಗ್ಂಷಿ ।
ಮಹ ಇತಿ ಬ್ರಹ್ಮ । ಬ್ರಹ್ಮಣಾ ವಾವ ಸರ್ವೇ ವೇದಾ ಮಹೀ
ಯನ್ತೇ ಭೂರಿತಿ ವೈ ಪ್ರಾಣಃ । ಭುವ ಇತ್ಯಪಾನಃ । ಸುವ
ರಿತಿ ವ್ಯಾನಃ । ಮಹ ಇತ್ಯನ್ನಮ್ । ಅನ್ನೇನ ವಾವ ಸರ್ವೇ
ಪ್ರಾಣಾ ಮಹೀಯನ್ತೇ । ತಾ ವಾ ಏತಾಶ್ಚತಸ್ರಶ್ಚತುರ್ಧಾ ।
ಚತಸ್ರಶ್ಚತಸ್ರೋ ವ್ಯಾಹೃತಯಃ । ತಾ ಯೋ ವೇದ । ಸ ವೇದ
ಬ್ರಹ್ಮ ಸರ್ವೇಽಸ್ಮೈ ದೇವಾ ಬಲಿಮಾವಹನ್ತಿ ॥೫॥

(೧) 'ಭೂಃ' (೨) 'ಭುವಃ' (೩) 'ಸುವಃ,' ಎಂಬಿವು ಮೂರು ವ್ಯಾಹೃತಿಗಳಷ್ಟೆ. ಅವುಗಳಿಗೆ ನಾಲ್ಕನೆಯದಾದ ಈ ವ್ಯಾಹೃತಿಯನ್ನು ಮಹಾಚಮಸ್ಯನು ತಿಳಿದುಕೊಂಡನು. ಅದು ಯಾವುದೆಂದರೆ 'ಮಹಃ' ಎಂಬುದು. ಅದು ಬ್ರಹ್ಮವು, ಅದು ಆತ್ಮನು. ಉಳಿದವುಗಳು ದೇವತೆಗಳು, ಅಂದರೆ ಅಂಗಗಳು.

(೧) ಭೂಃ ಎಂಬುದೇ ಈ ಲೋಕವು ; ಭುವಃ ಎಂಬುದು ಅಂತರಿಕ್ಷವು ; ಸುವಃ ಎಂಬುದು ಸ್ವರ್ಗಲೋಕವು ; ಮಹಃ ಎಂಬುದು ಆದಿತ್ಯನು ; ಆದಿತ್ಯನಿಂದಲೇ ಅಲ್ಲವೆ ಲೋಕಗಳೆಲ್ಲಾ ಮಹತ್ತಾಗುವುವು ?

(೨) ಭೂಃ ಎಂಬುದೇ ಅಗ್ನಿ, ಭುವಃ ಎಂಬುದು ವಾಯು ; ಸುವಃ ಎಂಬುದು ಆದಿತ್ಯ ; ಮಹಃ ಎಂಬುದು ಚಂದ್ರನು ; ಚಂದ್ರನಿಂದಲೇ ಅಲ್ಲವೆ, ಜ್ಯೋತಿಗಳೆಲ್ಲವೂ ಪ್ರಕಾಶಗಳಾಗುವುವು ?

(೩) ಭೂಃ ಎಂಬುದೇ ಋಕ್ಕುಗಳು ; ಭುವಃ ಎಂಬುದು ಸಾಮಗಳು ; ಸುವಃ ಎಂಬುದು ಯಜುಸ್ಸುಗಳು ; ಮಹಃ ಎಂಬುದು ಬ್ರಹ್ಮ; ಬ್ರಹ್ಮದಿಂದಲೇ ಅಲ್ಲವೆ ವೇದಗಳು ಮಹತ್ತಾಗುವುವು ?

(೪) ಭೂಃ ಎಂಬುದು ಪ್ರಾಣವು ; ಭುವಃ ಎಂಬುದು ಅಪಾನವು. ಸುವಃ ಎಂಬುದು ವ್ಯಾನವು ; ಮಹಃ ಎಂಬುದು ಅನ್ನವು ; ಅನ್ನದಿಂದಲೇ ಅಲ್ಲವೆ ಪ್ರಾಣಗಳು ಮಹತ್ತಾಗುವುವು ?

ಈ ಪ್ರಸಿದ್ಧವಾದ ನಾಲಕ್ಕು ವ್ಯಾಹೃತಿಗಳು ನಾಲಕ್ಕು ವಿಧಗಳಾಗಿ ನಾಲಕ್ಕು ನಾಲಕ್ಕಾಗಿವೆ. ಅವುಗಳನ್ನು ಯಾವಾತನು ಅರಿಯುತ್ತಾನೋ ಅವನು ಬ್ರಹ್ಮವನ್ನು ಅರಿತುಕೊಂಡವನಾಗುವನು. ದೇವತೆಗಳೆಲ್ಲರೂ ಇವನಿಗೆ ಕಾಣಿಕೆಯನ್ನು ತಂದು ಕೊಡುತ್ತಾರೆ.

**ಭೂಃ, ಭುವಃ, ಸುವಃ** ಎಂಬ ಮೂರು ವ್ಯಾಹೃತಿಗಳವೆಯಷ್ಟೆ. ಅವುಗಳಿಗೆ ನಾಲ್ಕನೆಯದು **ಮಹಃ** ಎಂಬ ವ್ಯಾಹೃತಿಯನ್ನು ಮಹಾಚಮಸನ ಮಗನಾದ ಮಾಹಾಚಮಸ್ಯನು ಕಂಡುಹಿಡಿದನು. ಕಂಡುಹಿಡಿದ ದೊಡ್ಡದು ಎಂಬ ಅರ್ಥವುಳ್ಳ ಯಾವ ಈ ಮಹಃ ವ್ಯಾಹೃತಿಯುಂಟೋ ಅದು ಬ್ರಹ್ಮವು. ಅದೇ ಆತ್ಮನು.

ಈ ಮಂತ್ರದಲ್ಲಿರುವ ವ್ಯಾಹೃತಿ ಮತ್ತು ಅವುಗಳ ಅಂಗಗಳನ್ನು ಕೆಳಗೆ ವಿಂಗಡಿಸಿ ಬರೆದಿರುವುದು.

| | | ೧ | ೨ | ೩ | ೪ |
|---|---|---|---|---|---|
| (೧) | **ಭೂಃ** | ಭೂಲೋಕ, | ಅಗ್ನಿ, | ಋಗ್ವೇದ | ಪ್ರಾಣ |
| (೨) | **ಭುವಃ** | ಅಂತರಿಕ್ಷ, | ವಾಯು, | ಸಾಮ, | ಅಪಾನ |
| (೩) | **ಸುವಃ** | ಸ್ವರ್ಗ, | ಆದಿತ್ಯ, | ಯಜುಸ್ಸು, | ವ್ಯಾನ |
| (೪) | **ಮಹಃ** | ಆದಿತ್ಯ, | ಚಂದ್ರ, | ಪರಬ್ರಹ್ಮ, | ಅನ್ನವು. |

ಪರಬ್ರಹ್ಮ ಜೀವಾತ್ಮ ಎರಡೂ ಒಂದೇ. ಆದರೆ ಪ್ರಾಣಿಗಳಲ್ಲಿ ಅವಿದ್ಯಾ ಉಪಾಧಿಯ ಕಟ್ಟಿನಲ್ಲಿರುವುದರಿಂದ ಪರಬ್ರಹ್ಮನು ಜೀವಾತ್ಮ ಎಂದು ಕರೆಸಿಕೊಳ್ಳುತ್ತಾನೆ. ಅವಿದ್ಯಾ ಉಪಾಧಿಯು ನಿವೃತ್ತಿಯಾದರೆ ಪರಬ್ರಹ್ಮನೆನಿಸಿಕೊಳ್ಳುತ್ತಾನೆ. ಮಹಃ ಎಂಬ ವ್ಯಾಹೃತಿರೂಪದಲ್ಲಿ ಇರುವ ಜೀವಾತ್ಮನಿಗೆ ಅವಿದ್ಯಾ ಉಪಾಧಿಯು ಇರುವುದರಿಂದ ಭೂಃ, ಭುವಃ, ಸುವಃ ಎಂಬ ವ್ಯಾಹೃತಿಗಳೂ ಅವುಗಳ ಅಂಗಗಳೂ ಸಹ ಅವಿದ್ಯಾ ಉಪಾಧಿಗಳ ಕಟ್ಟಿನಲ್ಲಿರುತ್ತವೆ. ಉಪನಿಷತ್ತಿನ ಶಿಕ್ಷಾವಲ್ಲಿಯ ಈ ಮಂತ್ರ

ಗಳು ಅವಿದ್ಯೆಯನ್ನು ನಿವೃತ್ತಿಮಾಡಿಕೊಳ್ಳುವ ಕಾರ್ಯರೂಪಗಳನ್ನೇ ಬೋಧಿಸುತ್ತಿದೆ ಯೆಂಬುದು ನಿಸ್ಸಂಶಯದ ವಿಚಾರ.

ಆದುದರಿಂದ ಮಹಃ ಎಂಬ ವ್ಯಾಹೃತಿಗೆ ಯಾವ ಯಾವುದು ಅಂಗಗಳಾಗಿ ವೆಯೋ ಅವುಗಳೂ ಕೂಡ ಅವಿದ್ಯಾ ನಿವೃತ್ತಿಗೋಸ್ಕರ ಯಾವ ಯಾವ ವಿಧವಾದ ಕಾರ್ಯಗಳನ್ನು ಮಾಡಬೇಕಾಗಿವೆಯೋ ಅವುಗಳನ್ನು ಕೆಳಗೆ ವಿವರಿಸೋಣ. ಈ ವಿವರಣೆಯ ಸೌಕರ್ಯಕ್ಕೂ ಮತ್ತು ವ್ಯಾಹೃತಿಯ ಉಪಾಸನೆಯ ವಿಚಾರವನ್ನು ತಿಳಿ ಯುವ ಸೌಕರ್ಯಕ್ಕೂ ಕೆಳಗೆ ಮನುಷ್ಯನ ಚಿತ್ರವೊಂದನ್ನು ಕೊಟ್ಟಿರುವುದು.

## (೧) ವ್ಯಾಹೃತಿಗಳ ಪ್ರಥಮ ಅಂಗಗಳ ವಿವರಣೆ

ವ್ಯಾಹೃತಿಗಳ ಪ್ರಥಮ ಅಂಗಗಳಲ್ಲಿ ಭೂಲೋಕ, ಅಂತರಿಕ್ಷ, ಸ್ವರ್ಗ, ಆದಿತ್ಯ ಇವುಗಳು ಇವೆ. ವ್ಯಾಹೃತಿಗಳ ಮೊದಲನೆಯ ಅಂಗಗಳಲ್ಲಿರುವ "ಭೂರಿತಿ ವಾ ಅಯಂ ಲೋಕ" ಎನ್ನುವುದೇ ಭೂಲೋಕ, ಅಂದರೆ ನಮ್ಮ ಸ್ಥೂಲದೇಹ. ಈ ಸ್ಥೂಲದೇಹದಲ್ಲಿ ಪೃಥಿವೀತತ್ವಕ್ಕೆ ಪ್ರಧಾನವಾದ ಸ್ಥಳವೇ ಮೂಲಾಧಾರಚಕ್ರ. ಚಿತ್ರದಲ್ಲಿ ಮೂಲಾ ಧಾರ ಚಕ್ರಪ್ರದೇಶದಲ್ಲಿ "ಭೂಃ" ಎಂದು ಬರೆದಿದೆ. ಪ್ರಥಮದಲ್ಲಿ ನಮ್ಮ ಸ್ಥೂಲದೇಹಕ್ಕೆ ರಜಸ್ತಮೋಗುಣಗಳಿಂದ ಉಂಟಾಗುವ ರೋಗಾದಿಗಳಿಲ್ಲದೆ ಮೋಕ್ಷದದಾರಿಗೆ ಅನು ಕೂಲವಾಗುವಂತೆ ಆರೋಗ್ಯದಿಂದಿರಬೇಕು. ರಜಸ್ತಮೋಗುಣಗಳ ಆಹಾರವನ್ನು ತ್ಯಜಿಸಿ ಹಿತವಾಗಿಯೂ ಮಿತವಾಗಿಯೂ ಕಾಲಕ್ಕೆ ಸರಿಯಾಗಿಯೂ ಸಾತ್ವಿಕಾಹಾರ ವನ್ನು ಸೇವಿಸುತ್ತಾ ನಮ್ಮ ದೇಹವನ್ನು ಸತ್ವಗುಣವಾದದ್ದನ್ನಾಗಿ ಮಾಡಿಕೊಳ್ಳಬೇಕು.

ಈ ರೀತಿ ದೇಹದ ಮಾಂಸ, ನರ, ಚರ್ಮ ಮುಂತಾದ್ದನ್ನು ಸತ್ವಪ್ರಧಾನವಾದ ದ್ದನ್ನಾಗಿ ಮಾಡಿಕ್ಕೊಳ್ಳುವಿಕೆಯೇ ಮುಂದೆ ಹೇಳಿರುವ ಧಾತುವಾಂಗ್ತೋಪಾಸನೆ ಯೆನಿಸುವುದು. ಅಲ್ಲದೆ ಧ್ಯಾನಮಾಡಲು ಅರ್ಹತೆಯನ್ನುಂಟುಮಾಡುವ ಶಾಸ್ತ್ರೋಕ್ತ ವಾದ ಆಸನದಲ್ಲಿ ಕುಳಿತುಕೊಳ್ಳುವುದಕ್ಕೆ ದೇಹವು ಅರ್ಹತೆಯಾಗಬೇಕು. ಈ ಪೃಥಿವೀತತ್ವಕ್ಕೆ ಪ್ರಧಾನವಾದ ಈ ಮೂಲಾಧಾರಚಕ್ರದಲ್ಲಿ ದೇಹವನ್ನು ಧರಿಸಿ ಕೊಂಡು ದೇಹವ್ಯಾಪಾರಕ್ಕೆ ಆಧಾರವಾದ ಪರಾಶಕ್ತಿಯ ಸ್ವರೂಪವಾದ ಶ್ರೀಕುಂಡ ಲನೀಶಕ್ತಿಯು ಇರುವುದು. ಈ ರೀತಿ ಪೃಥಿವೀದೇವತೆಯು ಇರುವುದೆಂತ ಆನಂದ ವಲ್ಲಿಯಲ್ಲಿ "ಪೃಥಿವೀ ಪುಚ್ಛಂ ಪ್ರತಿಷ್ಠಾ" ಎಂಬ ಮಂತ್ರದ ಭಾಷ್ಯದಲ್ಲೂ ಇದೆ. ಮೋಕ್ಷಾಧಿಕಾರಿಯು ಮೋಕ್ಷವನ್ನು ಪಡೆಯಲು ಈ ದೇವಿಯನ್ನು ಪ್ರಾರ್ಥಿಸಿ ಅವಳ ಅನುಗ್ರಹಕ್ಕೂ ಪಾತ್ರನಾಗಬೇಕು.

ಭೂಲೋಕವ ವಿಚಾರವನ್ನು ಮೇಲೆ ತಿಳಿಸಿತು. ಅಂತರಿಕ್ಷ ಮತ್ತು ಸ್ವರ್ಗಗಳ ತತ್ವಗಳೇನೆಂದರೆ—ನಮ್ಮ ದೇಹದಲ್ಲಿರುವ ಮೂಲಾಧಾರಚಕ್ರದ ಅಂತರಿಕ್ಷವೆಂದರೆ ಮೇಲ್ಭಾಗದ ಕೊನೆಯಲ್ಲಿ ಸೂರ್ಯನಾಡಿ, ಚಂದ್ರನಾಡಿ, ಸುಷುಮ್ನಾನಾಡಿಗಳಾದ ಈ ಮೂರೂ ಸಂಧಿಸುತ್ತವೆ. ಬೆನ್ನಿನಹುರಿಯಲ್ಲಿ ಮೂಲಾಧಾರಚಕ್ರದಿಂದ ಭ್ರೂಮಧ್ಯದವರೆಗೆ ಇರುವ ಈ ಮೂರುನಾಡಿಗಳನ್ನು ಚಿತ್ರದಲ್ಲಿ ತೋರಿಸಿದೆ. ಸೂರ್ಯ ಚಂದ್ರರು ತಮ್ಮ ತಮ್ಮ ನಾಡಿಗಳಲ್ಲಿ ಯಾತಾಯಾತವಾಗಿ ಎಳೆಯುತ್ತಿರುವುದರಿಂದ ಸ್ಪಂದನಶಕ್ತಿಯುಂಟಾಗಿ ಶ್ವಾಸೋಚ್ಛ್ವಾಸವು ಉಂಟಾಗುವುದಲ್ಲದೆ ದೇಹವು ವ್ಯಾಪಾರೋನ್ಮುಖವಾಗುತ್ತದೆ.

ಬೆನ್ನಿನ ಹುರಿಯಲ್ಲಿ ಮಧ್ಯದಲ್ಲಿರುವುದೇ ಸುಷುಮ್ನಾನಾಡಿ. ಮೂಲಾಧಾರಚಕ್ರದಲ್ಲಿ ಈ ಸುಷುಮ್ನಾನಾಡಿಯ ದ್ವಾರವು ಮುಚ್ಚಲ್ಪಟ್ಟಿದೆ. ಈ ದ್ವಾರವನ್ನು ತೆಗಿಸಿ ಸುಷುಮ್ನಾನಾಡಿಯೊಳಗೆ ಪ್ರಾಣಶಕ್ತಿಗಳೊಡನೆ ಬುದ್ಧಿ ಮನಸ್ಸಿನ ವೃತ್ತಿಯು ಧ್ಯಾನಾಭ್ಯಾಸ ಕಾಲದಲ್ಲಿ ಪ್ರವೇಶಿಸುವಿಕೆಯೇ ಅಂತರಿಕ್ಷದ ತತ್ವವಾಗಿದೆ. ಈ ಸುಷುಮ್ನಾನಾಡಿಯು ಮೂಲಾಧಾರ ಚಕ್ರದಿಂದ ಪ್ರಾರಂಭವಾಗಿ ಶಿರಸ್ಸಿನವರೆಗೂ ಇರುವುದು· ಇದು ಸ್ವರ್ಗಲೋಕದ ತತ್ವ. ನಮ್ಮ ನಮ್ಮ ಮೂಲಸ್ಥಾನವೆಂದರೆ ಪರಬ್ರಹ್ಮಸ್ಥಿತಿಯನ್ನು ಸುಷುಮ್ನಾನಾಡಿಯ ಅಂತ್ಯದಲ್ಲಿ ಶಿರಸ್ಸಿನೊಳಗೆ ಹೊಂದುವುದರಿಂದ ಸುಷುಮ್ನಾನಾಡಿಯು ಸ್ವರ್ಗದ ತತ್ವದಲ್ಲಿದೆ.

ವ್ಯಾಹೃತಿಗಳ ಪ್ರಥಮ ಅಂಗಗಳಿಗೆ ಆದಿತ್ಯನೇ "ಮಹಃ" ಎಂಬ ವ್ಯಾಹೃತಿ ರೂಪನಾಗಿರುತ್ತಾನೆ. ಅಂದರೆ ಆದಿತ್ಯನು ಪರಬ್ರಹ್ಮ ಮತ್ತು ಆತ್ಮನ ಸ್ಥಾನದಲ್ಲಿದ್ದಂತಾಗುವುದು. ಅಂತರಿಕ್ಷ ಮತ್ತು ಸ್ವರ್ಗ ಎಂಬುವುಗಳ ತತ್ವದಲ್ಲಿ ಪ್ರಾಣಶಕ್ತಿಗಳೊಡನೆ ಬುದ್ಧಿ ಮನಸ್ಸಿನ ವೃತ್ತಿಯು ಧ್ಯಾನಾಭ್ಯಾಸ ಕಾಲದಲ್ಲಿ ಸುಷುಮ್ನಾನಾಡಿಯೊಳಕ್ಕೆ ಪ್ರವೇಶಿಸುವಿಕೆಯೆಂದು ಬರೆದಿರುತ್ತಷ್ಟೆ. ಧ್ಯಾನವು ಅಭಿವೃದ್ಧಿಯಾಗುತ್ತಾ ಬಂದಂತೆ ಬುದ್ಧಿ ಮನಸ್ಸಿನ ವೃತ್ತಿಗಳು ಮೂಲಾಧಾರ ಚಕ್ರದಮೂಲಕ ಸುಷುಮ್ನಾನಾಡಿಯೊಳಗೆ ಮೇಲಕ್ಕೆ ಮೇಲಕ್ಕೆ ಹೋಗುತ್ತಾ ಎದೆಯ ಸ್ಥಳಕ್ಕೆ ಸರಿಯಾಗಿ ಮನುಷ್ಯ ಚಿತ್ರದಲ್ಲಿ ಗುರುತಿಸಿರುವಂತೆ ಬೆನ್ನಿನ ಹುರಿಯಲ್ಲಿ ಇರುವ ಅನಾಹತ ಚಕ್ರವನ್ನು ಸೇರುವುದು. ಈ ಅನಾಹತಚಕ್ರದಲ್ಲೇ ನಮ್ಮಲ್ಲಿರುವ ಆದಿತ್ಯನಿರುತ್ತಾನೆ. ಸ್ವಯಂಪ್ರಕಾಶವಾದ ಪರಬ್ರಹ್ಮವೇ ಆದಿತ್ಯರೂಪಿನಲ್ಲಿದ್ದರೂ, ಆದಿತ್ಯರೂಪವು ಪರಬ್ರಹ್ಮನ ಪ್ರತಿಫಲನ (ಚಿದಾಭಾಸ) ವಾದ್ದರಿಂದ ಚಿದಾಭಾಸತ್ವವು ಮಿಥ್ಯಾರೂಪವಾದುದು.

"**ಏಷೋಂತರಾದಿತ್ಯೇ ಹಿರಣ್ಮಯಃ ಪುರುಷಃ**" ಎಂಬ ಮತ್ತು "**ಸಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ**". ಎಂಬ ಶ್ರುತಿ ಪ್ರಮಾಣದಂತೆ ಪರಬ್ರಹ್ಮವು ಅಂತರ್ಯಾಮಿಯಾಗಿ ಆದಿತ್ಯನಲ್ಲಿರುವುದರಿಂದಲೂ ಚಿದಾಭಾಸನಾದ ಆದಿತ್ಯ

ನಿಂದಲೇ ಲೋಕಗಳು ಮಹತ್ತಾಗುವುದರಿಂದ ಆದಿತ್ಯನಿಗೊಂದು ಶ್ರೇಷ್ಠತೆ ಇರುವುದ ರಿಂದಲೂ ಮಹಃ ಎಂಬ ವ್ಯಾಹೃತಿ ಸ್ಥಾನದಲ್ಲಿರುತ್ತಾನೆ. ಮುಖ್ಯವಾಗಿ ಧ್ಯಾನ ಮಾಡುವ ಅಧಿಕಾರಿಯ ಬುದ್ಧಿಮನಸ್ಸಿನ ವೃತ್ತಿಗಳು ಸುಷುಮ್ನಾ ಮಾರ್ಗದಲ್ಲಿ ಪ್ರವೇಶಿಸಿ ಅನಾಹತ ಚಕ್ರದಲ್ಲಿರುವ ಸೂರ್ಯನೊಡಗೂಡುವುದೆಂಬ ತತ್ವವಾಗಿರುವುದು.

## (೨) ವ್ಯಾಹೃತಿಗಳ ದ್ವಿತೀಯ ಅಂಗಗಳಲ್ಲಿರುವವುಗಳ ವಿವರಣೆ

ಎರಡನೆ ಅಂಗಗಳಲ್ಲಿ ಅಗ್ನಿ, ವಾಯು, ಆದಿತ್ಯ, ಚಂದ್ರ ಇವುಗಳು ಇವೆ.

ಅಗ್ನಿಯ ತತ್ವವೇನೆಂದರೆ–"**ಹೃದಯೇ ದಕ್ಷಿಣಾಗ್ನಿ ರುದರೇ ಗಾರ್ಹಪತ್ಯಂ ಮುಖೇಚಾಹವನೀಯಂ**" ಎಂಬ ಗರ್ಭೋಪನಿಷತ್ ಪ್ರಮಾಣದಂತೆ ಅನ್ನಮಯ ಕೋಶಕ್ಕೆ ಪ್ರಧಾನವಾದ ಮೂಲಾಧಾರಚಕ್ರದಲ್ಲಿ ಗಾರ್ಹಪತ್ಯಾಗ್ನಿಯೂ, ಹೃದಯ ಸ್ಥಳವಾದ ಅನಾಹತ ಚಕ್ರದಲ್ಲಿದ್ದ ದಕ್ಷಿಣಾಗ್ನಿಯೂ, ಮುಖವೆಂದರೆ ಭ್ರೂಮಧ್ಯದ ಆಜ್ಞಾ ಚಕ್ರದಲ್ಲಿ ಆಹವನೀಯಾಗ್ನಿಯೂ ಇರುವವು. ಮೂಲಾಧಾರದಲ್ಲಿರುವ ಅಗ್ನಿಗೆ ವೈಶ್ವಾನರಾಗ್ನಿ ಎಂಬ ಹೆಸರೂ ಇದೆ. ಕಮ್ಮಾರನು ತಿದಿ ಒತ್ತಿದ ಕಾಲದಲ್ಲಿ ಹೇಗೆ ಅಗ್ನಿಜ್ವಾಲೆಯು ಮೇಲಕ್ಕೆ ಪ್ರಸರಿಸುವುದೋ ಹಾಗೆಯೇ ಧ್ಯಾನಯೋಗಕಾಲ ದಲ್ಲಿ ಮೂಲಧಾರದಲ್ಲಿರುವ ಅಪಾನ ವಾಯುವು ಮೇಲಕ್ಕೆ ಬೀಸುವುದರಿಂದ ಮೂಲಾ ಧಾರದಲ್ಲಿರುವ ಅಗ್ನಿಯು ಮೇಲಕ್ಕೆ ಪ್ರಸರಿಸಿಕೊಂಡು ಅನಾಹತಚಕ್ರವನ್ನು ಸೇರಿ ಅಲ್ಲಿರುವ ದಕ್ಷಿಣಾಗ್ನಿಯನ್ನು ಪ್ರಜ್ವಲನೆಯಾಗುವಂತೆ ಮಾಡುವುದು.

ಗಾರ್ಹಪತ್ಯದಕ್ಷಿಣಾಗ್ನಿಗಳೆರಡೂ ಪ್ರಜ್ವಲನೆಯಾಗುವುದರಿಂದ ಅನಾಹತ ಚಕ್ರದಲ್ಲಿರುವ ಸೂರ್ಯನಿಗೆ ಕಿರಣರಹಿತವಾಗಿ "**ಅಗ್ನಿಃಪೂರ್ವರೂಪಂ ಆದಿತ್ಯ ಉತ್ತರರೂಪಂ**" ಎಂದು ಈ ಉಪನಿಷತ್ತಿನಲ್ಲಿ ಹೇಳಿರುವಂತೆ ನಮ್ಮಲ್ಲಿರುವ ಸೂರ್ಯನು ಅಗ್ನಿರೂಪನಾಗುವನು. ಅನಾಹತ ಚಕ್ರದಲ್ಲಿರುವ ದಕ್ಷಿಣಾಗ್ನಿಯೂ ಪ್ರಜ್ವಲನೆ ಯಾಗುವುದರಿಂದ ಗಾರ್ಹಪತ್ಯದಕ್ಷಿಣಾಗ್ನಿಗಳೆರಡೂ ಒಂದಾಗಿ ಭ್ರೂಮಧ್ಯದಲ್ಲಿರುವ ಆಹವನೀಯಾಗ್ನಿಯನ್ನು ಪ್ರಜ್ವಲನೆಯಾಗುವಂತೆ ಮಾಡುವುವು. ಓಂಕಾರೋಪಾಸ ನೆಯ ಧ್ಯಾನಯೋಗದಲ್ಲಿ ಅಪಾನವಾಯುವು ಭ್ರೂಮಧ್ಯದವರಿವಿಗೂ ಅಗ್ನಿಪ್ರಜ್ವಲನೆ ಯಾಗುವಂತೆ ಮಾಡುವ ಶಕ್ತಿಯುಳ್ಳದ್ದಾಗಿದೆ.

ಅಗ್ನಿ, ವಾಯು, ಆದಿತ್ಯ, ಈ ಮೂರರ ವಿಚಾರವನ್ನು ಮೇಲೆ ತಿಳಿಸಿತು. ಎರಡನೆ ಅಂಗಗಳಲ್ಲಿ ಮಹಃ ಎಂಬ ವ್ಯಾಹೃತಿಯ ರೂಪದಲ್ಲಿರುವ ಚಂದ್ರನ ತತ್ವವೇ

ನೆಂದರೆ **"ತಾಲು ಮೂಲೇತು ಚಂದ್ರಮಾಃ"** ಎಂಬ ಶ್ರುತಿ ಪ್ರಮಾಣದಂತೆ ನಮ್ಮ ಅಂಗಳಿನ ಮೇಲುಗಡೆ ಅಂದರೆ ಭ್ರೂಮಧ್ಯಕ್ಕೆ ಕೊಂಚ ಮೇಲ್ಭಾಗದಲ್ಲಿ ಚಂದ್ರ ನಿರುತ್ತಾನೆ. ಇಲ್ಲಿ ಕೊಟ್ಟಿರುವ ಮನುಷ್ಯನ ಚಿತ್ರದಲ್ಲಿ ಶಿರಸ್ಸಿನಲ್ಲಿ ಕಮಲಪುಷ್ಪ ವನ್ನು ಬರೆದಿದೆಯಷ್ಟೆ. ಆ ಕಮಲಪುಷ್ಪಕ್ಕೆ ಸೇರಿದ ಹಾಗೆ ಚಂದ್ರನಿರುವನು ಪರಬ್ರಹ್ಮನೇ ಮಹಃ ವ್ಯಾಹೃತಿರೂಪವಾದ ಚಂದ್ರರೂಪಿನಲ್ಲಿ ಇರುವನೆಂಬುದನ್ನು ತ್ರಿಪುರತಾಪಿನ್ಯುಪನಿಷತ್ತಿನ ಕೆಳಗಿನ ವಾಕ್ಯವು ಸಮರ್ಥಿಸುವುದು.

**"ಪರಾಂ ಭಗವತೀಂ ಚಂದ್ರಮಂಡಲ ಮಧ್ಯವರ್ತಿನೀಂ ಚಂದ್ರಕಳಾಂ ಚಿತ್ಕಳಾಂ ಮಹಾಲಕ್ಷ್ಮೀಂ ಮಹಾತ್ರಿಪುರಾಂದೇವೀಂಧ್ಯಾಯೇತ್"**

ಅಲ್ಲದೆ ಶ್ರೀ ಶಂಕರಭಗವತ್ಪಾದಾಚಾರ್ಯರವರು ಸೌಂದರ್ಯಲಹರಿಯಲ್ಲಿ

**ಸುಧಾಧಾರಾ ಸಾರೈಶ್ಚರಣ ಯುಗಳಾಂತ ರ್ವಿಗಳಿತೈಃ |**
**ಪ್ರಪಂಚಂ ಸಿಂಚಂತೀ ಪುನರಪಿ ರಸಾಮ್ನಾಯ ಮಹಸಃ |**

**ತಾತ್ಪರ್ಯ :—**ಎಲೌ ಜಗನ್ಮಾತೆಯೆ! ನೀನು ಹೃದಯಾಕಾಶವೆನಿಸುವ ಸಹ ಸ್ರಾರಕಮಲದಲ್ಲಿರುವ ನಿನ್ನ ಚರಣಯುಗಳದಿಂದ ಜನಿಸಿದ ಅಮೃತವೃಷ್ಟಿಪ್ರವಾಹ ದಿಂದ ದೇಹದಲ್ಲಿರುವ ಎಪ್ಪತ್ತೆರಡು ಸಾವಿರ ನಾಡಿಗಳನ್ನೂ ತೋಯಿಸಿ ಅಮೃತರಸದ ಅತಿಶಯವಾದ ಕಾಂತಿಯುಳ್ಳ ಚಂದ್ರನ ಮೂಲಕವಾಗಿ ಎಂದು ಹೇಳಿರುವುದರಿಂದ ಚಂದ್ರನು ಅಮೃತಕಿರಣ ಸ್ವರೂಪನಾಗಿ ಬಿಂದು, ನಾದ, ಕಳೆಗಳಲ್ಲಿ ಕಳಾಸ್ವರೂಪ ನಾಗಿ ಆನಂದವಾದ ತೇಜಸ್ಸುಳ್ಳವನಾಗಿರುತ್ತಾನೆ.

**"ಆರ್ದ್ರಂ ಜ್ವಲತಿ ಜ್ಯೋತಿರಹಮಸ್ಮಿ"**

ಎಂಬ ಶ್ರುತಿವಾಕ್ಯದಲ್ಲಿರುವ ಶೈತ್ಯದೊಡಗೂಡಿ ಪ್ರಕಾಶಿಸುವ ಜ್ಯೋತಿಸ್ವರೂಪನೆಂದರೆ ಅಮೃತಕಿರಣದೊಡಗೂಡಿರುವ ಪ್ರಕಾಶಕ್ಕೆ ಜ್ಯೋತಿ ಎಂಬ ಹೆಸರು. ಬುದ್ಧಿ ಮನಸ್ಸಿನ ವೃತ್ತಿಗಳು ಧ್ಯಾನಾಭ್ಯಾಸದಲ್ಲಿ ಅಭಿವೃದ್ಧಿಯನ್ನು ಪಡೆದಂತೆ ಸುಷುಮ್ನಾನಾಡಿಯೊಳಗೆ ಅನಾಹತಚಕ್ರದಿಂದಲೂ ಮೇಲಕ್ಕೆ ಭ್ರೂಮಧ್ಯದ ಸ್ಥಳಕ್ಕೆ ತಲಪಿದಾಗ ಅಹವನೀ ಯಾಗ್ನಿಯು ಪ್ರಜ್ವಲಿಸುವುದು. ಆಗ ಚಂದ್ರನು ಸೂರ್ಯಾಗ್ನಿಗಳನ್ನು ನುಂಗುವನು. ಅಂದರೆ ಸೂರ್ಯ ಅಗ್ನಿಗಳು ಶಾಪದಾಯಕಗಳಾಗಿರುವುದರಿಂದ ಆನಂದವಿರುವುದಿಲ್ಲ. ಚಂದ್ರಪ್ರಕಾಶವು ಆನಂದದಾಯಕವಾಗಿರುವುದು. ಅದುದರಿಂದ ಚಂದ್ರನು ಸೂರ್ಯಾಗ್ನಿ ಗಳನ್ನು ನುಂಗುವನು. ಇದೇ ಕಳಾಸ್ಥಿತಿ. ಬುದ್ಧಿ ಮನಸ್ಸಿನ ವೃತ್ತಿಗಳು ಇಂತಹ ಕಳಾಸ್ಥಿತಿಗೆ ಬಂದು ನಿಂತಿವೆಯೆಂಬ ತತ್ವವಾಗಿದೆ.

ವ್ಯಾಹೃತಿಗಳ ಪ್ರಥಮ ಅಂಗಗಳಲ್ಲಿ ಸೂರ್ಯನಿಗೆ ಮಹತ್ತನ್ನು ಕೊಟ್ಟಿದೆ. ಈಗ ಸೂರ್ಯನನ್ನು ನುಂಗಿದ ಚಂದ್ರನಿಗೆ ಮಹತ್ತು ಕೊಟ್ಟಿರುವುದು. ಆದ್ದರಿಂದಲೇ

ಜ್ಯೋತಿಯೆಂದರೆ ಪ್ರಕಾಶಕ್ಕೆಲ್ಲಾ ಮಹತ್ತನ್ನು ಕೊಡುವವನು ಚಂದ್ರನೆಂದು ಈ ಉಪನಿಷತ್ತಿನಲ್ಲಿ ಹೇಳಿದೆ. ಮೂಲಾಧಾರಚಕ್ರದಲ್ಲಿ ಅಗ್ನಿಯೂ, ಅನಾಹತಚಕ್ರದಲ್ಲಿ ಸೂರ್ಯನೂ, ಶಿರಸ್ಸಿನಲ್ಲಿ ಚಂದ್ರನೂ ಇರುತ್ತಾರೆಂತ ಇದುವರೆಗೂ ತಿಳಿಸಿತಷ್ಟೆ. ಇದನ್ನು ಶ್ರೀವ್ಯಾಸ ಮಹರ್ಷಿಗಳು ಬ್ರಹ್ಮಾಂಡ ಪುರಾಣದಲ್ಲಿ ಶ್ರೀ ಲಲಿತಾಸಹಸ್ರನಾಮಾವಳಿಯಲ್ಲಿ ಹೇಳಿರುವ ವಾಕ್ಯ ಸಮರ್ಥಿಸುವುದು.

"ಶಿರಸ್ಥಿತಾ ಚಂದ್ರನಿಭಾ ಹೃದಯಸ್ಥಾ ರವಿಪ್ರಖ್ಯಾ
ತ್ರಿಕೋಣಾಂತರ ದೀಪಿಕಾ"

ಅಂದರೆ ಶಿರಸ್ಸಿನಲ್ಲಿ ಚಂದ್ರಪ್ರಕಾಶ ಎದೆಯಲ್ಲಿ ಸೂರ್ಯಪ್ರಕಾಶ, ಮೂಲಾಧಾರ ಚಕ್ರದಲ್ಲಿ ಅಗ್ನಿಪ್ರಕಾಶಗಳಿವೆಯೆಂಬ ತಾತ್ಪರ್ಯ.

## ೩. ವ್ಯಾಹೃತಿಗಳ ತೃತೀಯ ಅಂಗಗಳಲ್ಲಿರುವುವುಗಳ ವಿವರಣೆ

ಮೂರನೆ ಅಂಗಗಳಲ್ಲಿ ಋಗ್ವೇದ, ಸಾಮವೇದ, ಯಜುರ್ವೇದ, ಬ್ರಹ್ಮ, ಇವುಗಳು ಇವೆ.

ದೇವತಾತ್ಮಕವಾದ ಜ್ಞಾನ, ಕ್ರಿಯಾ, ಇಚ್ಛಾಶಕ್ತಿಗಳೇ ಋಕ್, ಯಜುಸ್, ಸಾಮವೇದಗಳ ಸ್ವರೂಪಗಳಾಗಿರುವುವು. ಋಗ್ವೇದವು ಜ್ಞಾನಶಕ್ತಿಯ ತತ್ವದ್ದು. "ಋಚ್ಯಂತೆ-ಸ್ತೂಯಂತೆ ದೇವಾನ್ ಅನಯೇತಿ ಋಕ್" ಎಂಬ ವ್ಯುತ್ಪತ್ತಿಯಂತೆ ಸಮಸ್ತ ಯಜ್ಞದೇವತೆಗಳ ಸ್ವರೂಪದ ಜ್ಞಾನವನ್ನು ತಿಳಿಸುವ ಮಂತ್ರವು. ಇಂತಹ ದೇವತಾತ್ಮಕವಾದ ಋಗ್ವೇದದ ತತ್ವವಾದ ಜ್ಞಾನಶಕ್ತಿಯು ನಮ್ಮಲ್ಲಿ ಅವಿದ್ಯಾಬಂಧನಕ್ಕೆ ಸಿಕ್ಕಿ "**ದೇಹ ನಾನು**" ಎಂಬ ಜ್ಞಾನ ಮತ್ತು ವಿಷಯಾದಿ ಜ್ಞಾನಗಳಲ್ಲಿ ಪ್ರವರ್ತಿಸುತ್ತಿದೆ. ಅನಿತ್ಯವಾದ ದೇಹವು ನಾನಲ್ಲ ಪರಮಾತ್ಮನೇ ನಾನೆಂಬ ಪರೋಕ್ಷ ಜ್ಞಾನವನ್ನು ನಿತ್ಯಾನಿತ್ಯ ವಸ್ತು ವಿವೇಕದಿಂದ ಸಂಪಾದಿಸಿಕೊಳ್ಳಬೇಕು. ಧ್ಯಾನಾಭ್ಯಾಸದಿಂದ ಜ್ಞಾನಸ್ವರೂಪನಾದ ಪರಮಾತ್ಮನನ್ನು ಹೊಂದಬೇಕು.

ಸಾಮವೇದದ ತತ್ವವೇನೆಂದರೆ–ಯಜ್ಞದೇವತೆಗಳನ್ನು ಕುರಿತು ನಾನು ನಿಮ್ಮವನೆಂದು ನಮ್ರತೆಯಿಂದಲೂ ಗಾಂಭೀರ್ಯದಿಂದಲೂ ಪ್ರಾರ್ಥಿಸುವ ಮತ್ತು ಪರಸ್ಪರ ಸಂಬಂಧವನ್ನು ಕೋರಿ ಏಕೀಕರಣವಾಗುವ ಸ್ತೋತ್ರವನ್ನು ನಿರೂಪಿಸುವುದೇ ಸಾಮವೇದವು. ಅಂದರೆ ಸಾಮವೇದವು ಇಚ್ಛಾಶಕ್ತಿಗೆ ಸೇರಿದುದು. ಸಾಮಶಬ್ದಕ್ಕೆ "ಸಾಂತ್ವೇ, ಸಾಂತ್ವಃ (ಪ್ರಿಯ ಕರಣಂ)" ಏಕೀಕರಣವಾಗುವ ಅತ್ಯಂತ ಪ್ರಿಯವಾದ ವಾಕ್ಕೆಂದು ಅರ್ಥವಾಗುವುದು. ನಿತ್ಯಾನಿತ್ಯವಸ್ತು ವಿವೇಕದಿಂದ ಅನಿತ್ಯವಾದ ದೇಹವು ನಾನಲ್ಲ ಪರಮಾತ್ಮನೇ ನಾನೆಂಬ ಪರೋಕ್ಷಜ್ಞಾನವನ್ನು ಸಂಪಾದಿಸಿಕೊಂಡು,

ಧ್ಯಾನಾಭ್ಯಾಸದಿಂದ ಪರಮಾತ್ಮ ಜ್ಞಾನವನ್ನು ಹೊಂದಬೇಕೆಂದು ಋಗ್ವೇದದ ತತ್ವದಲ್ಲಿ ತಿಳಿಸಿತಷ್ಟೆ. ಧ್ಯಾನಾಭ್ಯಾಸದ ಕಾಲದಲ್ಲಿ ಬುದ್ಧಿಯ ಜ್ಞಾನಶಕ್ತಿಯು ಸಾಮವೇದದ ತತ್ವವನ್ನು ಹೊಂದಬೇಕು. ಅಂದರೆ, ಬುದ್ಧಿಯ ಜ್ಞಾನಶಕ್ತಿಯು ಪರಬ್ರಹ್ಮವೇ ತಾನೆಂದು ಪರಮ ಪ್ರೀತಿಯಿಂದ ಧ್ಯಾನಾಭ್ಯಾಸಮಾಡುತ್ತಾ ಏಕೀಕರಣವೆಂದರೆ ಪರ ಮಾತ್ಮ ಸ್ವರೂಪವಾಗುವಿಕೆಯೇ ಸಾಮವೇದದ ತತ್ವ. ಸಾಮವೇದವು ಮೂಲತಃ ಋಗ್ವೇದಕ್ಕೆ ಸೇರಿದ್ದು. ಅಂದರೆ ಸಾಮವೇದದ ತತ್ವವಾದ ಇಚ್ಛಾಶಕ್ತಿಯು ಜ್ಞಾನ ಶಕ್ತಿಗೇ ಸೇರಿದುದು.

ಜಪ ಹೋಮಾದಿ ಕ್ರಿಯೆಗಳನ್ನು ಯಜುರ್ವೇದವು ಸೂಚಿಸುವುದರಿಂದ ಕ್ರಿಯಾ ಶಕ್ತಿ ಸ್ವರೂಪವಾದುದು. **"ಇಜ್ಯತೇ ಅನೇನೇತಿ ಯಜುಃ ಯಜ ದೇವಪೂಜಾ ಸಂಗತಿ ಕರಣ ದಾನೇಷು"** ದೇವತೆಗಳ ಪ್ರಿತ್ಯರ್ಥವಾಗಿ ಮಾಡುವ ಯಜ್ಞಕರ್ಮ ಗಳನ್ನು ನಿರೂಪಿಸುವುದು ಯಜುರ್ವೇದವು. ಇಂತಹ ದೇವತಾತ್ಮಕವಾದ ಕ್ರಿಯಾ ಶಕ್ತಿಯು ಅವಿದ್ಯಾಕಟ್ಟಿಗೆ ಸಿಕ್ಕಿ ಇಂದ್ರಿಯಗಳ ಮೂಲಕ ದೇಹ ಮತ್ತು ಲೋಕವ್ಯವ ಹಾರಗಳ ಕಾರ್ಯಗಳಲ್ಲಿ ನಿರತವಾಗಿರುವುದು. ಲೋಕವ್ಯವಹಾರಗಳ ಕಾರ್ಯಗಳನ್ನು ತ್ಯಜಿಸಿ ವೇದಾಂತ ಶ್ರವಣ, ಮನನ, ಕಾರ್ಯಗಳಲ್ಲಿ ಪ್ರಥಮದಲ್ಲಿ ನಿರತವಾಗಿ ನಂತರ ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ ಕಾರ್ಯಗಳಲ್ಲಿ ನಿರತವಾಗ ಬೇಕು.

ನಾವು ಬೆಂಗಳೂರಿನಲ್ಲಿದ್ದು ಮದ್ರಾಸು ನೋಡಬೇಕೆಂದು ಅಪೇಕ್ಷೆಪಟ್ಟಲ್ಲಿ, ಬೆಂಗಳೂರಿನಿಂದ ಮದ್ರಾಸಿಗೆ ಪ್ರಯಾಣ ಮಾಡಿಕೊಂಡು ಹೋಗುವ ಕಾರ್ಯವಾಗ ಬೇಕು. ಇದರಂತೆ ಮೂಲಾಧಾರಚಕ್ರದಿಂದ ಪ್ರಾರಂಭವಾಗಿ ಸುಷುಮ್ನಾಮಾರ್ಗ ದಲ್ಲಿ ಶಿರಸ್ಸಿನವರಿಗೆ ಹೋಗಬೇಕಾದರೆ, ಜ್ಞಾನಶಕ್ತಿಯೊಂದೇ ಹೋಗಲಾರದು. ಕ್ರಿಯಾಶಕ್ತಿಯು ಓಂಕಾರೋಚ್ಚಾರಣೆಯಿಂದ ಧ್ಯಾನಮಾಡುವ ಕಾರ್ಯವನ್ನು ಮಾಡುತ್ತಾ ಜ್ಞಾನಶಕ್ತಿಯನ್ನು ಮೇಲ ಮೇಲಕ್ಕೆ ಕರೆದುಕೊಂಡು ಹೋಗುವುದು. ಹಿಂದಿನ ಅಂಗಗಳಲ್ಲಿ ತಿಳಿಸಿರುವಂತೆ ಚಂದ್ರನ ಸ್ಥಾನಕ್ಕೆಂದರೆ ಕಳಾಸ್ಥಿತಿಯನ್ನು ಸೇರಿ ದಾಗ, ಕ್ರಿಯಾಶಕ್ತಿಯು ತಟಸ್ಥವಾಗುವುದು. ಆಗ ಜ್ಞಾನಶಕ್ತಿಯು ಕ್ರಿಯಾಶಕ್ತಿ ಯನ್ನು ತನ್ನಲ್ಲಿ ಅಡಗಿಸಿಕೊಂಡು ಪರಬ್ರಹ್ಮದಲ್ಲಿ ಲೀನವಾಗಿ ಪರಬ್ರಹ್ಮವೇ ಆಗುವುದು.

ಈ ಮೇಲಿನ ತತ್ವ ಪ್ರತಿಪಾದಕವಾಗಿಯೇ ಈ ಎರಡನೆ ಅಂಗಗಳಲ್ಲಿ ಮಹಃ ಎಂಬ ವ್ಯಾಹೃತಿಗೆ ಬ್ರಹ್ಮ ಎಂಬುದು ಇದೆ. ಅಂದರೆ ಇದೇ ಪರಬ್ರಹ್ಮಸಾಕ್ಷಾತ್ಕಾರದ ಸ್ಥಿತಿ ಎಂಬುದನ್ನು ಪ್ರತಿಪಾದಿಸುವುದು. ಪ್ರಥಮದಲ್ಲಿ ಅಗ್ನಿ, ಅನಂತರ ಆದಿತ್ಯ, ನಂತರ ಚಂದ್ರ ಈ ಸೋಪಾನಗಳನ್ನು ಹತ್ತಿಕೊಂಡು ಅನಂತರ ಪರಬ್ರಹ್ಮಸಾಕ್ಷಾ ತ್ಕಾರವಾಗುವುದು. ಆದಿತ್ಯನ ಸೋಪಾನಕ್ಕೆ ಹತ್ತಿದರೆ ತಮೋಗುಣದ ಉಪಾಧಿಯು ನಿವೃತ್ತಿಯಾಗುವುದು. ಚಂದ್ರನ ಅಂದರೆ ಕಳಾಸೋಪಾನಕ್ಕೆ ಹತ್ತಿದರೆ ರಜೋ

ಗುಣದ ಉಪಾಧಿಯು ನಿವೃತ್ತಿಯಾಗುವುದೆಂದರೆ ಅವಿದ್ಯಾಉಪಾಧಿಯು ನಿವೃತ್ತಿಯಾಗುವುದು. ಕಲಾಸೋಪಾನದಿಂದ ಪರಬ್ರಹ್ಮಸಾಕ್ಷಾತ್ಕಾರವಾದಾಗ ಶುದ್ಧಸತ್ವಗುಣದ ಅಂದರೆ ವಿದ್ಯಾ ಉಪಾಧಿಯೂ ನಿವೃತ್ತಿಯಾಗುವುದು.

## ೪. ವ್ಯಾಹೃತಿಗಳ ಚತುರ್ಥ ಅಂಗಗಳಲ್ಲಿರುವವುಗಳ ವಿವರಣೆ

ನಾಲ್ಕನೇ ಅಂಗಗಳಲ್ಲಿ ಪ್ರಾಣ, ಅಪಾನ, ವ್ಯಾನ, ಅನ್ನ ಇವುಗಳಿವೆ.

ಪ್ರಾಣ ವಾಯುವು ಎದೆಯಲ್ಲಿ ಹೃದಯಕೋಶದಲ್ಲಿದೆ. ಅಪಾನ ವಾಯುವು ಗುದಮಂಡಲದಲ್ಲಿದೆ. ವ್ಯಾನ ವಾಯುವು ಶರೀರದಲ್ಲೆಲ್ಲಾ ಇರುವುದು. ಪ್ರಾಣವೆಂಬರೇನು ಎಂಬುದನ್ನು ನಾವು ಪ್ರಥಮದಲ್ಲಿ ಅರಿಯಬೇಕು. ಪ್ರಾಣವೆಂದರೆ ದೇಹದಲ್ಲಿರುವ ಸ್ಪಂದನಶಕ್ತಿ. ದೇಹದಲ್ಲಿರುವ ಸೂರ್ಯಶಕ್ತಿಯು ಸೂರ್ಯನಾಡಿಯಲ್ಲಿ ಮೇಲಕ್ಕೆ ಎಳೆಯುವುದು. ಚಂದ್ರಶಕ್ತಿಯು ಚಂದ್ರನಾಡಿಯಲ್ಲಿ ಕೆಳಕ್ಕೆ ಎಳೆಯುವುದು, ಹೀಗೆ ಮೇಲಕ್ಕೂ ಕೆಳಕ್ಕೂ ಎಳೆಯುವುದರಿಂದ ಸ್ಪಂದನವುಂಟಾಗಿ ಶ್ವಾಸೋಚ್ಛ್ವಾಸದ ಕೆಲಸವು ಪಂಚ ಪ್ರಾಣಗಳ ಕಾರ್ಯಗಳೂ ಇಂದ್ರಿಯಗಳ ಕಾರ್ಯಗಳೂ ಬುದ್ಧಿ ಮನಸ್ಸಿನ ಕಾರ್ಯಗಳೂ ನಡೆಯುವವು. ಪ್ರಾಣಸ್ಪಂದನವನ್ನು ನಿರೋಧಮಾಡುವವರಿಗೂ ಮನಸ್ಸಿನ ಚಂಚಲತ್ವವು ಹೋಗಲಾರದು. ಬುದ್ಧಿಯ ಜ್ಞಾನವೂ ಏಕಾಗ್ರತೆಯಾಗಿ ನಿಲ್ಲಲಾರದು ನಿದ್ರಾ ಕಾಲದಲ್ಲಿ ಇಂದ್ರಿಯಗಳು ಬುದ್ಧಿ ಮನಸ್ಸಿನ ವೃತ್ತಿಗಳು ತಮೋಗುಣದಲ್ಲಿ ಲೀನವಾಗಿದ್ದರೂ, ಪಂಚ ಪ್ರಾಣಗಳು ಶ್ವಾಸೋಚ್ಛ್ವಾಸವು ಸ್ಪಂದನಶಕ್ತಿಯಿಂದ ತಮ್ಮ ಕಾರ್ಯಗಳನ್ನು ಮಾಡುತ್ತಿರುತ್ತವೆ.

ಪ್ರಾಣಸ್ಪಂದನವನ್ನು ನಿರೋಧಿಸಲು ಯುಕ್ತಾಹಾರ ವಿಹಾರವಾಗಿದ್ದುಕೊಂಡು ಪ್ರಾಣಾಯಾಮದ ಅನುಷ್ಠಾನಮಾಡಿ ಶ್ವಾಸೋಚ್ಛ್ವಾಸವನ್ನು ನಿಲುಗಡೆಗೆ ತಂದುಕೊಳ್ಳಬೇಕು. ಶ್ವಾಸೋಚ್ಛ್ವಾಸ ಯಾವಾಗ ನಿಲುಗಡೆಗೆ ಬರುತ್ತೋ ಆಗ ಬುದ್ಧಿ ಮನಸ್ಸುಗಳಿಗೆ ಚಂಚಲತ್ವವು ತಗ್ಗುವುದು. ಯೋಗಶಿಖೋಪನಿಷತ್ತಿನ ವಾಕ್ಯವು ಮೇಲಿನ ವಿಚಾರವನ್ನು ಸಮರ್ಥಿಸುವುದು.

**ನಾನಾ ವಿಧೈರ್ವಿಚಾರೈಸ್ತು ನ ಬಾಧ್ಯಂ । ಜಾಯತೇ ಮನಃ ।**
**ತಸ್ಮಾತ್ತಸ್ಯ ಜಯೋಪಾಯಃ ಪ್ರಾಣ ಏವ ಹಿ ನಾನ್ಯಥಾ ।**
**ತರ್ಕೈರ್ಜಲ್ಪೈ ಶ್ಶಾಸ್ತ್ರ ಜಾಲೈ ರ್ಯುಕ್ತಿಭಿರ್ಮನ್ತ್ರ ಭೇಷಜೈಃ ।**
**ನ ವಶೋಜಾಯತೇ ಪ್ರಾಣ ಸ್ಸಿದ್ಧ್ಯುಪಾಯಂ ವಿನಾ ವಿಧೇ ।**
**ಉಪಾಯಂ ತಮ ವಿಜ್ಞಾಯ ಯೋಗಮಾರ್ಗೇ ಪ್ರವರ್ತತೆ ।**

**ತಾತ್ಪರ್ಯ**—ನಾನಾ ವಿಧವಾದ ವಿಚಾರಗಳಿಂದಲೇ ಚಂಚಲತ್ವವನ್ನು ತಪ್ಪಿಸಿ ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳಲು ಸಾಧ್ಯವಿಲ್ಲ. ಆದುದರಿಂದ ಮನಸ್ಸನ್ನು ತಟಸ್ಥ ಸ್ಥಿತಿಗೆ ತಂದುಕೊಳ್ಳಲು ಪ್ರಾಣವಾಯುವನ್ನು ಸ್ವಾಧೀನಕ್ಕೆ ತಂದುಕೊಳ್ಳುವುದರ ಹೊರತು ಬೇರೆ ದಾರಿಯೇ ಇಲ್ಲ. ತರ್ಕಶಾಸ್ತ್ರದಿಂದಾಗಲಿ, ವಾಗ್ವಾದದಿಂದಾಗಲಿ, ಶಾಸ್ತ್ರವ್ಯಾಸಂಗದಿಂದಾಗಲಿ, ಯುಕ್ತಿಯಿಂದಾಗಲಿ, ಮಂತ್ರೋಚ್ಚಾರಣೆಯ ವೇಷದಿಂದಾಗಲಿ, ಪ್ರಾಣವಾಯುವು ಶ್ವಾಸೋಚ್ಛ್ವಾಸ ವಾಯುವು ಎಂದಿಗೂ ವಶವಾಗುವುದಿಲ್ಲ. ಇದಕ್ಕೆ ಉಪಾಯವೇನೆಂದರೆ ಅಂಧಕಾರವನ್ನು ನಾಶಗೊಳಿಸುವ ಯೋಗ ಮಾರ್ಗದಲ್ಲಿ ಪ್ರವರ್ತನೆಯಾಗಬೇಕು.

ಅಲ್ಲದೆ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ "ಪ್ರಾಣಾಪಾನೌಸಮೌಕೃತ್ವಾ ನಾಸಾಭ್ಯಂತರ ಚಾರಿಣೌ" ಎಂಬುದಾಗಿಯೂ "ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ । ಪ್ರಾಣಾಪಾನಗತೀರುದ್ಧ್ವಾ ಪ್ರಾಣಾಯಾಮ ಪರಾಯಣಾಃ ।" ಎಂಬದಾಗಿ ಹೇಳಿರುತ್ತಾನೆ. ಶ್ರೀ ಶಂಕರಭಗವತ್ಪಾದಾಚಾರ್ಯರವರೂ ಕೂಡ "ಪರೇಚ ಪೂರೈರನಿಲಸ್ಯ ಕುಂಭೈಃ ಸರ್ವಾಸು ನಾಡೀಷು ವಿಶೋಧಿತಾಸು" ಎಂಬದಾಗಿ ಹೇಳಿರುತ್ತಾರೆ. ವ್ಯಾಹೃತಿಗಳ ನಾಲ್ಕನೇ ಅಂಗಗಳಲ್ಲಿರುವ ಪ್ರಾಣ, ಅಪಾನ, ವ್ಯಾನಗಳ ಮುಖ್ಯತತ್ವವು ಪ್ರಾಣಾಯಾಮದ ಅನುಷ್ಠಾನ ಮಾಡಿ ಶ್ವಾಸೋಚ್ಛ್ವಾಸವನ್ನು ನಿಲುಗಡೆಗೆ ತಂದುಕೊಂಡರೆ ಪ್ರಾಣಶಕ್ತಿ (ಸ್ಪಂದನ ಶಕ್ತಿ)ಯು ಧ್ಯಾನಾಭ್ಯಾಸದಿಂದ ಪರಬ್ರಹ್ಮನಲ್ಲಿ ಲೀನವಾಗುವುದು. ಪ್ರಾಣಶಕ್ತಿಯು ಏಕಾಕಾರವಾಗಿ ಪರಬ್ರಹ್ಮನಲ್ಲಿ ಲೀನನಾಗುವವರಿಗೆ ಪ್ರಣವವೆಂದರೆ 'ಓಂ'ಕಾರವೆನಿಸುವುದಿಲ್ಲ. ಇದನ್ನೇ ಅಥರ್ವಶಿಖೋಪನಿಷತ್ತಿನ ವಾಕ್ಯವು ಸಮರ್ಥಿಸುವುದು.

ಪ್ರಾಣಾನ್‌ತ್ಸರ್ವಾನ್ಪ್ರರಮಾತ್ಮನಿ । ಪ್ರಣಾಮಯತಿತ್ಯೇತಸ್ಮಾತ್ಪ್ರಣವಃ"

ಅಲ್ಲದೆ ಶ್ರೀ ಶಂಕರ ಭಗವತ್ಪಾದಾಚಾರ್ಯರವರು ಯೋಗತಾರಾವಳಿಯಲ್ಲಿ ಹೇಳಿರುವ "ಪ್ರಾಣಃ ಪ್ರತೀಚೀನ ಪಥೇನ ಮಂದಂ । ವಿಲೀಯತೆ ವಿಷ್ಣುಪದಾಂತರಾಲೇ" ಎಂಬ ವಾಕ್ಯವೂ ಸಮರ್ಥಿಸುವುದು. ಆದುದರಿಂದ ಪ್ರಾಣಶಕ್ತಿಯು ಏಕಾಕಾರವಾಗಿ ನಮ್ಮ ಶಿರಸ್ಸಿನಲ್ಲಿರುವ ಪರಬ್ರಹ್ಮನಲ್ಲಿ ಪ್ರವಹಿಸುತ್ತಿದ್ದರೇನೆ. ಪರಬ್ರಹ್ಮನು ಪ್ರಣವ ಅಥವಾ "**ಓಂ ಇತ್ಯೇಕಾಕ್ಷರಂ ಬ್ರಹ್ಮ**" ಎಂದು ಕರೆಸಿಕೊಳ್ಳುವನು. ವ್ಯಾಹೃತಿಗಳ ಮೂರನೆಯ ಅಂಗಗಳಲ್ಲಿರುವ ಮಹಃ ಎಂಬುವುದಕ್ಕೆ ಬ್ರಹ್ಮವೆಂದು ತಿಳಿಸಿದುದಲ್ಲದೆ, ಅದೇ ಬ್ರಹ್ಮಸಾಕ್ಷಾತ್ಕಾರದ ಸ್ಥಿತಿಯೆಂದೂ ತಿಳಿಸಿರುತ್ತಷ್ಟೆ. ಈ ಸ್ಥಿತಿಯಲ್ಲೂ ಪ್ರಾಣವು ಏಕಾಕಾರವಾಗಿ ಪರಬ್ರಹ್ಮನಲ್ಲಿ ಪ್ರವಹಿಸುತ್ತಿರುತ್ತೆ. ಪ್ರಾಣವು ಏಕಾಕಾರವಾಗಿ ಪ್ರವಹಿಸದಿದ್ದರೆ ಅದು ಬ್ರಹ್ಮಸಾಕ್ಷಾತ್ಕಾರವೆನಿಸುವುದಿಲ್ಲ. ಮುಂದೆ ಪಾಂಕ್ತೋಪಾಸನೆಯಲ್ಲಿ

ಹೇಳಿರುವ ವಾಯು ಪಾಙ್ಕ್ತ ಮತ್ತು ಇಂದ್ರಿಯ ಪಾಙ್ಕ್ತಗಳು ಇಲ್ಲಿಯು ಯೋಗಾನುಷ್ಠಾನಕ್ಕೆ ಸಂಬಂಧ ಪಟ್ಟವುಗಳಾಗಿವೆ.

ವ್ಯಾಹೃತಿಗಳ ನಾಲ್ಕನೆಯ ಅಂಗಗಳಲ್ಲಿರುವ ಮಹಃ ವ್ಯಾಹೃತಿಗೆ ಅನ್ನವೆಂದು ಇದೆ. ಇದರ ತತ್ವವೇನೆಂದರೆ, ಬ್ರಹ್ಮನು ಪ್ರಳಯದಲ್ಲಿ ಜಗತ್ತಿನ ಸಕಲವನ್ನು ಭಕ್ಷಿಸುವವನಾದ್ದರಿಂದ ಬ್ರಹ್ಮನಿಗೆ ಅನ್ನವೆಂದು ಹೆಸರು ಬಂದಿದೆ. ಅಂದರೆ ಜೀವಂತನಾಗಿದ್ದು ಬ್ರಹ್ಮಸಾಕ್ಷಾತ್ಕಾರಸ್ವರೂಪನಾದ ಸಮಾಧಿಸ್ಥಿತಿಯನ್ನು ಹೊಂದಿದಾಗ ಪ್ರಾಣಶಕ್ತಿ ಬುದ್ಧಿ ಮನಸ್ಸಿನ ವೃತ್ತಿಗಳು ತೈಲಧಾರೆಯಂತೆ ಏಕಾಕಾರವಾಗಿ ಪರಬ್ರಹ್ಮನಲ್ಲಿ ಲೀನವಾಗಿದ್ದು, ಸಮಾಧಿಯಿಂದ ಬಹಿರ್ಮುಖವಾದಾಗ ಪ್ರಾಣಶಕ್ತಿ ಮತ್ತು ಬುದ್ಧಿಮನಸ್ಸಿನ ವೃತ್ತಿಗಳು ಪುನಃ ಉದಯವಾಗುವುವು. ಜೀವಂತನಾಗಿದ್ದಾಗ ಎಷ್ಟೋಸಲ ಸಮಾಧಿಸ್ಥನಾಗಿ ಬಹಿರ್ಮುಖನಾಗುತ್ತಾನೆ. ದೇಹಪತನಕಾಲದಲ್ಲಿ ಸಕಲ ಪ್ರಾಣಗಳನ್ನೂ ಪರಬ್ರಹ್ಮವು ಭಕ್ಷಿಸಿಬಿಡುವುದು. ದೇಹಪತನಕಾಲದಲ್ಲಿ ಓಂಕಾರ ಪ್ರಣವಗಳೆಂಬ ಹೆಸರೇ ಇರುವುದಿಲ್ಲ. ಈ ತತ್ವಕ್ಕೆ ಸರಿಯಾಗಿ ಅಥರ್ವಶಿಖೋಪನಿಷತ್ತಿನಲ್ಲಿ "ಪ್ರಾಣಾನ್ ತ್ಸರ್ವಾನ್ಪ್ರಲೀಯತ ಇತಿ ಪ್ರಳಯಃ" ಎಂದು ಹೇಳಿದೆ. ಅಂದರೆ ಲಯದಲ್ಲಿ ಪರಬ್ರಹ್ಮನು ಜಗತ್ತನ್ನೆಲ್ಲಾ ಭಕ್ಷಿಸುತ್ತಾನೆ. ಆದುದರಿಂದ ಈ ಮೇಲಿನ ತತ್ವಗಳಿಗನುಸಾರವಾಗಿ ಮಹಃ ಎಂಬ ವ್ಯಾಹೃತಿಗೆ ಅನ್ನವೆಂದು ಇದೆ.

"**ಭೂರ್ಭುವಃ ಸುವರತಿವಾ**"ದಿಂದ ಪ್ರಾರಂಭವಾಗುವ ೫ನೇ ಅನುವಾಕದ ಮಂತ್ರದ ಅರ್ಥವು ಇಲ್ಲಿಗೆ ಪೂರ್ಣವಾಯಿತು. ಮಂತ್ರದ ಕೊನೆಯಲ್ಲಿ "**ತಾಯೋ ವೇದ । ಸ ವೇದ ಬ್ರಹ್ಮ । ಸರ್ವೇಽ ಸ್ಮೈ ದೇವಾ ಬಲಿಮಾವಹನ್ತಿ।**" ಎಂದಿದೆ. ಈ ಮಂತ್ರದಲ್ಲಿ ಉಪಾಸನೆ ಮಾಡತಕ್ಕದ್ದು ಎಂದು ವಿಧಾಯಕ ಮಾಡುವ ಶಬ್ದಗಳಿಲ್ಲ. 'ತಾಯೋ ವೇದ' ಎಂದರೆ ವಿಚಾರಗಳ ತಿಳುವಳಿಕೆ ಮಾತ್ರ ಉಂಟಾಗುವುದೆಂತಲೂ ಈ ವಿಚಾರಗಳ ತಿಳುವಳಿಕೆಗಳು ಮುಂದಿನ ಮಂತ್ರದಲ್ಲಿ ಹೇಳುವ ಉಪಾಸನೆಗೆ ಸಹಕಾರಿಯಾದುದೆಂದೂ ಭಾಷ್ಯದಲ್ಲೇ ಬರೆದಿದೆ. ಈ ವಿಚಾರಗಳ ತಿಳುವಳಿಕೆಗಳು ಬ್ರಹ್ಮವನ್ನು ಹೊಂದುವುದಕ್ಕೆ ಸಹಕಾರಿಗಳಾದ್ದರಿಂದ ಅದನ್ನು ತಿಳಿದವನು ಉತ್ತಮಾಧಿಕಾರಿಯಾಗುವನೆಂಬುದನ್ನು ಪ್ರತಿಪಾದಿಸುವುದು. ಈ ವಿಚಾರಗಳ ತಿಳುವಳಿಕೆ ಪಡೆದು ಮನಸ್ಸನ್ನು ಪರಿಪಕ್ವಸ್ಥಿತಿಗೆ ತಂದುಕೊಂಡವನು ದೇವತೆಗಳಿಗಿಂತ ಶ್ರೇಷ್ಠನಾಗುವನೆಂಬುದೇ ದೇವತೆಗಳೆಲ್ಲರೂ ಆತನಿಗೆ ಕಾಣಿಕೆಯನ್ನು ತಂದುಕೊಡುವರೆಂದು ಉಪನಿಷತ್ತಿನಲ್ಲಿ ಹೇಳಿರುವುದರ ತತ್ವಾರ್ಥವಾಗಿದೆ.

# ೫ನೆಯ ಪ್ರಕರಣ

## ಓಮಿತಿ ಬ್ರಹ್ಮ ಓಮಿತೀದಗ್ಂ ಸರ್ವಮ್ ಎಂಬುದರ ವಿವರಣೆ

೫ನೇ ಪ್ರಕರಣದಲ್ಲಿರುವ ವಿಷಯಗಳು—[ಓಂಕಾರಸ್ವರೂಪಿಯಾದ ಪರಾಶಕ್ತಿಯು ಉದಯಿಸಿ ಸಪ್ತಮಾತೃಕಾಶಕ್ತಿಯಾಗಿ ವಿಭಾಗವಾಗಿ ನಾದ ಬ್ರಹ್ಮದಿಂದ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುತ್ತಾರೆಂಬ ವಿಚಾರ. ಭೂಃ, ಭುವಃ, ಸುವಃ, ಮಹಃ, ಜನಃ, ತಪಃ, ಸತ್ಯಂ ಎಂಬ ಸಪ್ತವ್ಯಾಹೃತಿಗಳಲ್ಲಿ ಪ್ರಥಮ ಆರರಲ್ಲಿ ವಿಸರ್ಗವೂ ಕೊನೆಯದಾದ ಸತ್ಯಂ ಪದದಲ್ಲಿ ಅನುಸ್ವಾರವೂ ಇರಲು ಕಾರಣವೇನು ಎಂಬ ವಿಚಾರ. ಅಕ್ಷರಕ್ಕೆಲ್ಲಾ ಪ್ರಥಮಾಕ್ಷರವಾದ “ಅ” ಸ್ವರಾಕ್ಷರವು ಅನುಸ್ವಾರದೊಡನೆ ಕೂಡಿ, “ಅಂ” ಅಕ್ಷರವಾಗಿ ಜ್ಞಾನಶಕ್ತಿಯಾಗಿಯೂ “ಅ” ಅಕ್ಷರವು ವಿಸರ್ಗ ದೊಡಗೂಡಿ “ಅಃ” ಅಕ್ಷರವಾಗಿ ಕ್ರಿಯಾಶಕ್ತಿಯಾಗಿಯೂ, ‘ಅಃ, ಅಂ” ಎರಡಕ್ಷರವೂ ಕೂಡಿ ‘ಅಹಂ’ ಎಂಬ ಜ್ಞಾನಶಕ್ತಿಯಾಗುವ ವಿಚಾರ. ಈ ಮೂರು ಅಕ್ಷರ ಶಕ್ತಿಗಳು ಜಗತ್ತಿನ ಸ್ವರೂಪವಾಗಿವೆ ಎಂಬ ವಿಚಾರ. “ಅಂ” ಅಕ್ಷರವೆ ಅಂತ್ಯದಲ್ಲಿ ಓಂಕಾರವಾಗುವುದು ಎಂಬ ವಿಚಾರ.]

### ಆರನೆ ಅನುವಾಕದ ಮಂತ್ರ

**ಸ ಯ ಏಷೋಽನ್ತ ರ್ಹೃದಯ ಆಕಾಶಃ । ತಸ್ಮಿನ್ನಯಂ ಪುರುಷೋ ಮನೋಮಯಃ । ಅಮೃತೋ ಹಿರಣ್ಮಯಃ । ಅನ್ತರೇಣ ತಾಲುಕೇ । ಯ ಏಷಸ್ತನ ಇವಾವಲಮ್ಬತೇ । ಸೇನ್ದ್ರಯೋನಿಃ । ಯತ್ರಾಸೌ ಕೇಶಾನ್ತೋ ವಿವರ್ತತೇ । ವ್ಯಪೋಹ್ಯ ಶೀರ್ಷಕಪಾಲೇ । ಭೂರಿತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ । ಸುವರಿತ್ಯಾದಿತ್ಯೇ । ಮಹ ಇತಿ ಬ್ರಹ್ಮಣಿ । ಆಪ್ನೋತಿ ಸ್ವಾರಾಜ್ಯಮ್ । ಆಪ್ನೋತಿ ಮನಸಸ್ಪತಿಮ್ । ವಾಕ್ಪತಿ ಶ್ಚಕ್ಷುಷ್ಪತಿಃ ಶ್ರೋತ್ರಪತಿ ರ್ವಿಜ್ಞಾನಪತಿಃ ಏತತ್ ।**

**ತತೋ ಭವತಿ । ಆಕಾಶಶರೀರಂ ಬ್ರಹ್ಮ । ಸತ್ಯಾತ್ಮ ಪ್ರಾಣಾ ರಾಮಂ ಮನ ಆನನ್ದಮ್ । ಶಾನ್ತಿ ಸಮೃದ್ಧಮಮೃತಮ್ । ಇತಿ ಪ್ರಾಚೀನಯೋಗ್ಯೋಪಾಸ್ಸ್ವ ॥೬॥**

೬. ಹೃದಯದ ಒಳಗೆ ಯಾವ ಈ ಆಕಾಶವಿದೆಯೋ ಅದರಲ್ಲಿ ಈ ಮನೋಮಯನಾದ, ಅಮೃತನಾದ, ಹಿರಣ್ಮಯನಾದ ಪುರುಷನು ಇರುವನು. ತಾಲುಮೂಲದಲ್ಲಿ ಅಂದರೆ ಅಂಗಳಿನಲ್ಲಿ ಯಾವ ಸ್ತನದಂತೆ ಮಾಂಸಖಂಡವು ನೇತಾಡುತ್ತಿರುವುದೋ ಆ ಅಂಗಳಿನ ಮೂಲಸ್ಥಳವು ಇಂದ್ರನ ಯೋನಿಯು. ಕೂದಲುಗಳು ಇಬ್ಭಾಗವಾಗುವ ಸ್ಥಳವಾದ ಬೈತಲೆಯ ತುದಿಯು ಇರುವ ನಡುನೆತ್ತಿಯು. ಕಂಠದ ಹಿಂಭಾಗದ ಕೊಂಚ ಮೇಲುಗಡೆಯಲ್ಲಿ ತಲೆಬುರುಡೆಯ ಮಧ್ಯದಲ್ಲಿ ಭೂಃ ಎಂಬ ಅಗ್ನಿಯಲ್ಲಿ ನಿಲ್ಲುವನು ; ಭುವಃ ಎಂಬ ವಾಯುವಿನಲ್ಲಿ, ಸುವಃ ಎಂಬ ಆದಿತ್ಯನಲ್ಲಿ, ಮಹಃ ಎಂಬ ಬ್ರಹ್ಮದಲ್ಲಿ ನಿಲ್ಲುವನು. ಸ್ವಾರಾಜ್ಯವನ್ನು ಪಡೆದು ಕೊಳ್ಳುವನು, ಮನಸ್ಸುಗಳ ಒಡೆಯನನ್ನು ಪಡೆದುಕೊಳ್ಳುವನು. ವಾಕ್ಕಗಳಿಗೆ ಒಡೆಯನು, ಚಕ್ಷುಗಳಿಗೆ ಒಡೆಯನು, ಶ್ರೋತ್ರಗಳಿಗೆ ಒಡೆಯನು, ವಿಜ್ಞಾನಗಳಿಗೆ ಒಡೆಯನು. ಅದಕ್ಕಿಂತಲೂ ಹೆಚ್ಚಿನ ಇದೂ ಆಗುವನು. ಆಕಾಶ ಶರೀರವಾಗಿರುವ ಸರ್ವಾತ್ಮವಾದ ಪ್ರಾಣಾರಾಮವಾದ, ಮನ ಆನಂದವಾಗಿರುವ, ಶಾಂತಿ ಸಮೃದ್ಧವಾಗಿರುವ, ಅಮೃತವಾಗಿರುವ ಬ್ರಹ್ಮವು, ಹಿಗೇಂದು ಎಲೈ ಪ್ರಾಚೀನ ಯೋಗ್ಯನೇ ಉಪಾಸನೆ ಮಾಡು.

## ೮ನೇ ಅನುವಾಕದ ಮಂತ್ರ.

**ಓಮಿತಿ ಬ್ರಹ್ಮ । ಓಮಿತೀದಗ್ಂ ಸರ್ವಮ್ । ಓಮಿತ್ಯೇತದನುಕೃತಿ ಹ ಸ್ಮ ವಾ ಅಪ್ಯೋ ಶ್ರಾವಯೇತ್ಯಾಶ್ರಾವಯನ್ತಿ । ಓಮಿತಿ ಸಾಮಾನಿ ಗಾಯನ್ತಿ । ಓಗ್ಂ ಶೋಮಿತಿ ಶಸ್ತ್ರಾಣಿ ಶಗ್ಂ ಸನ್ತಿ । ಓಮಿತ್ಯಧ್ವರ್ಯುಃ ಪ್ರತಿಗರಂ ಪ್ರತಿಗೃಣಾತಿ । ಓಮಿತಿ ಬ್ರಹ್ಮಾ ಪ್ರಸೌತಿ । ಓಮಿತ್ಯಗ್ನಿ ಹೋತ್ರಮನುಜಾನಾತಿ । ಓಮಿತಿ ಬ್ರಾಹ್ಮಣಃ ಪ್ರವಕ್ಷ್ಯನ್ನಾಹ ಬ್ರಹ್ಮೋಪಾಪ್ನವಾನೀತಿ । ಬ್ರಹ್ಮೈವೋಪಾಪ್ನೋತಿ ॥೮॥**

೮. ಓಂ ಎಂಬುದು ಬ್ರಹ್ಮವು. ಇದೆಲ್ಲವೂ ಓಂ ಎಂಬುದು. ಓಂ ಎಂಬುದು ಅನುಕೃತಿಯಲ್ಲವೆ ? ಮತ್ತು **ಓಂ ಶ್ರಾವಯ !**" ಎಂದ ಮೇಲೆ ಮಂತ್ರವನ್ನು ಹೇಳುತ್ತಾರೆ. **ಓಂ !** ಎಂದು ಸಾಮಗಳನ್ನು ಗಾನ ಮಾಡುತ್ತಾರೆ.

• ಅಂತಃಕರಣ

ಹ, ಕ್ಷ

೧. ಸತ್ಯಂ. ಸಹಸ್ರಾರ ಕಮಲ. ಸ.
ಓಂಕಾರ.
ಆನಂದಮಯ ಕೋಶ
೨. ತಪಃ ಆಜ್ಞಾಚಕ್ರ. ಅ.
ಮಕಾರ.
ವಿಜ್ಞಾನಮಯ ಕೋಶ

ಅ, ಆ, ಇ, ಈ, ಉ, ಊ, ಋ, ೠ
ಌ, ೡ, ಏ, ಐ, ಓ, ಔ, ಅಂ, ಅಃ

೩ ಜನಃ. ವಿಶುದ್ಧಚಕ್ರ. ಗ.
ಮನೋಮಯಕೋಶ

ಕ, ಖ, ಗ, ಘ, ಙ, ಚ
ಛ, ಜ, ಝ, ಞ, ಟ, ಠ

೪. ಮಹಃ. ಅನಾಹತಚಕ್ರ. ಮ
ಉಕಾರ.
ಪ್ರಾಣಮಯ ಕೋಶ

ಡ, ಢ, ಣ, ತ, ಥ, ದ, ಧ, ನ
ಪ, ಫ

೫ ಸುವಃ. ಮಣಿಪೂರಚಕ್ರ ಪ.

ಬ, ಭ, ಮ, ಯ, ರ, ಲ

೬. ಭುವಃ. ಸ್ವಾಧಿಷ್ಠಾನಚಕ್ರ. ಧ.

ಅನ್ನಮಯ ಕೋಶ
೭. ಭೂಃ. ಮೂಲಾಧಾರಚಕ್ರ. ನಿ
ಅಕಾರ.

ವ, ಶ, ಷ, ಸ

**ಓಂ ಶೋಂ** ಎಂದು ಶಸ್ತ್ರಗಳನ್ನು ಶಂಸನ ಮಾಡುತ್ತಾರೆ. ಓಂ ಎಂದು ಅಧ್ವರ್ಯುವು ಪ್ರತಿಗರವನ್ನು ತಿರುಗಿ ಹೇಳುತ್ತಾನೆ. ಓಂ ಎಂದು ಬ್ರಹ್ಮನು ಒಪ್ಪಿಗೆ ಕೊಡುತ್ತಾನೆ. ಓಂ ಎಂದು ಅಗ್ನಿಹೋತ್ರಕ್ಕೆ ಒಪ್ಪಿಗೆಯನ್ನು ಕೊಡುತ್ತಾನೆ. ಬ್ರಹ್ಮವನ್ನೇ ನಾನು ಪಡೆಯಬೇಕು ಎಂದು ಬ್ರಾಹ್ಮಣನು ಪ್ರವಚನಮಾಡುವವನಾಗಿ **ಓಂ !** ಎಂದು ಉಚ್ಚರಿಸುತ್ತಾನೆ. ಬ್ರಹ್ಮವನ್ನೇ ಪಡೆಯುತ್ತಾನೆ.

ಪ್ರಥಮದಲ್ಲಿ ಎಂಟನೇ ಅನುವಾಕದಲ್ಲಿ ಹೇಳಿರುವ **ಓಂಕಾರದ** ಮಹಿಮೆಯನ್ನು ತಕ್ಕಮಟ್ಟಿಗೆ ತಿಳಿಸಿ ಅನಂತರ **ಓಂಕಾರೋಪಾಸನೆಯ** ಅನುಷ್ಠಾನ ಮಾರ್ಗದಲ್ಲಿ ಆರನೆಯ ಅನುವಾಕದ ಮಂತ್ರದಲ್ಲಿರುವ ತತ್ವವನ್ನು ವಿವರಿಸಿರುವುದು. ಇದು ತತ್ವಗಳ ವಿಂಗಡನೆಗೆ ಸರಿಯಾಗಿದೆ. ಇರುವುದು ಸಪ್ತವ್ಯಾಹೃತಿಗಳು ಯಾವುವೆಂದರೆ— **ಭೂಃ, ಭುವಃ, ಸುವಃ, ಮಹಃ, ಜನಃ, ತಪಃ, ಸತ್ಯಂ.** ಮಹಾಚಮಸ್ಯನು **ಭೂಃ, ಭುವಃ, ಸುವಃ** ಎಂಬ ಮೂರು ವ್ಯಾಹೃತಿಗಳನ್ನು ತೆಗೆದುಕೊಂಡು ತತ್ವಗಳನ್ನು ತಿಳಿಸುತ್ತಾ ಬಂದಿರುತ್ತಾನೆ. ಈ ಮೂರು ವ್ಯಾಹೃತಿಗಳಲ್ಲಿ ತಿಳಿಸುವ ತತ್ವಗಳು ಸಪ್ತವ್ಯಾಹೃತಿಗಳ ತತ್ವಗಳಿಗೆ ವಿರೋಧವಿಲ್ಲವೆ ಮತ್ತು ಓಂಕಾರದ ವಿಭಾಗವಾದ ಅಕಾರ, ಉಕಾರ ಮಕಾರಗಳ ತತ್ವಗಳಿಗೆ ಸಮಂಜಸವಾಗಿರುತ್ತದೆಯೇ ಎಂಬುವನ್ನು ವಿವರಿಸೋಣ. ವ್ಯಾಹೃತಿಗಳು ಯಾವ ಮೂಲಶಕ್ತಿಗಳಿಗೆ ಸೇರಿದವುಗಳೆಂಬುದನ್ನು ತಿಳಿದುಕೊಳ್ಳೋಣ.

"**ಓಂಕಾರಾದ್ವ್ಯಾಹೃತಯೋ ಭವಂತಿ**" ಎಂಬ ಗಾಯತ್ರ್ಯುಪನಿಷತ್ಪ್ರಮಾಣವಂತೆ ಓಂಕಾರ ಸ್ವರೂಪಿಣಿಯಾದ ಪರಬ್ರಹ್ಮಶಕ್ತಿಯು ತಾನಲ್ಲದೆ ಇತರ ಆರುಭಾಗಗಳ ಶಕ್ತಿಗಳಾಗಿ ವಿಭಾಗವಾಗುತ್ತಾಳೆ. ಅಂದರೆ ತಾನೂ ಸೇರಿ ಬ್ರಾಹ್ಮೀ, ಮಾಹೇಶ್ವರೀ, ಕೌಮಾರಿ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ ಎಂಬ ಸಪ್ತ ನಾದಬ್ರಹ್ಮದ ಮಾತೃಕಾಶಕ್ತಿಯಾಗಿರುತ್ತಾಳೆ. ಈ ಸಪ್ತಮಾತೃಕಾಶಕ್ತಿಗಳೇ ವೇದದಲ್ಲಿ ಸಪ್ತ ವ್ಯಾಹೃತಿಗಳೆಂದು ಕರೆಯಲ್ಪಡುವುವು. ವ್ಯಾಹೃತಿ ಪದಕ್ಕೆ ಉಚ್ಚರಿಸು ಎಂದು ಅರ್ಥವಾಗಿ, ವ್ಯಾಹೃತಿಗಳು ನಾದಬ್ರಹ್ಮಕ್ಕೇ ಸೇರಿದವುಗಳಾಗಿವೆ. ಈ ಸಪ್ತ ಮಾತೃಕಾಶಕ್ತಿಗಳು ಸಂಗೀತ ಶಾಸ್ತ್ರದ ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪ್ರತಿಮಧ್ಯಮ, ಧೈವತ, ನಿಷಾದ, ಎಂಬ ಏಳು ಸ್ವರಶಕ್ತಿಗಳಾಗಿಯೂ ಇವೆ. ಸ್ವರಶಬ್ದಕ್ಕೂ 'ಸ್ವರ್ಯಂತೆ ಉಚ್ಚಾರ್ಯಂತೆ' ಎಂಬ ಅರ್ಥವಂತೆ ಉಚ್ಚರಿಸು ಎಂಬುದು ನಾದಬ್ರಹ್ಮಕ್ಕೇ ಸೇರಿದುದು. ಓಂಕಾರ ಸ್ವರೂಪಿಣಿಯಾದ ಪರಬ್ರಹ್ಮಶಕ್ತಿಯು ಏಳು ಭಾಗಗಳಾಗಿ ಜಗತ್ಸ್ವರೂಪವಾಗಿರುವ ತತ್ವವನ್ನು ಕೆಳಗಿನ ಈ ತೈತ್ತಿರೀಯ ಶ್ರುತಿವಾಕ್ಯವೇ ಸಮರ್ಥಿಸುವುದು.

**ಸಪ್ತಪ್ರಾಣಾಃ ಪ್ರಭವನ್ತಿತಸ್ಮಾತ್ಸಪ್ತಾರ್ಚಿಷ ಸ್ಸಮಿಧ**
**ಸಪ್ತಜಿಹ್ವಾಃ । ಸಪ್ತ ಇಮೇಲೋಕಾಯೇಷು ಚರನ್ತಿ ।**
**ಪ್ರಾಣಾ ಗುಹಾಶ್ರಯಾಂ ನಿಹಿತಾ ಸ್ಸಪ್ತಸ್ಸಪ್ತ ।**

**ತಾತ್ಪರ್ಯ॥**—ಏಳು ಪ್ರಾಣಗಳೆಂದರೆ ಸಪ್ತಮಾತೃಕಾರೂಪವಾದ ಏಳು ಶಕ್ತಿಗಳು ಓಂಕಾರದಿಂದ ಉದ್ಭವಿಸುತ್ತವೆ. ಈ ಏಳು ಶಕ್ತಿಗಳಿಂದ ಅಗ್ನಿಗೆ ಏಳು ಜ್ವಾಲೆಗಳು, ಏಳು ಸಮಿತ್ತುಗಳು, ಏಳು ನಾಲಿಗೆಗಳು ಉಂಟಾಗುವುವು. ಈ ಸಪ್ತಮಾತೃಕಾಶಕ್ತಿಗಳು ಓಂಕಾರದ ಆಶ್ರಯದಿಂದ ಏಳು ಲೋಕಗಳಲ್ಲೂ ಅನೇಕ ಏಳು ಏಳುಗಳಾಗಿ ಚರಿಸುತ್ತವೆ.

ಈ ಸಪ್ತಮಾತೃಕಾಶಕ್ತಿಗಳು ನಮ್ಮ ದೇಹದಲ್ಲಿ ಎಲ್ಲೆಲ್ಲಿ ನೆಲೆಸಿವೆ, ಯಾವ ಕಾರ್ಯಗಳನ್ನು ಮಾಡುತ್ತವೆ ಎಂಬುದನ್ನು ತಿಳಿದುಕೊಳ್ಳೋಣ. ಇಲ್ಲಿ ಮನುಷ್ಯದೇಹದ ಚಿತ್ರವೊಂದನ್ನು ಕೊಟ್ಟಿರುವುದಷ್ಟೆ. ಮನುಷ್ಯದೇಹದ ಚಿತ್ರದಲ್ಲಿ ಶಿರಸ್ಸಿನೊಳಗೆ ಕಮಲಪುಷ್ಪದ ಮೇಲೆ ಓಂ ಎಂದು ಬರೆದಿದೆ. ಓಂಕಾರ ಸ್ವರೂಪಿಣಿಯಾದ ಬ್ರಾಹ್ಮೀಶಕ್ತಿಯು ತನ್ನ ಓಂಕಾರ ಸ್ಥಾನದಿಂದ ಸುಷುಮ್ನಾನಾಡಿಯೊಳಗೇ ಮೂಲಾಧಾರಚಕ್ರದವರಿಗೆ ಪ್ರಸರಿಸಿಕೊಂಡು ತಾನಿರುವ ಓಂಕಾರ ಸ್ಥಳದಲ್ಲಿಯೇ ನೆಲೆಸುವುದು. ಅಂದರೆ ಬ್ರಾಹ್ಮೀ ಶಕ್ತಿ ಸರ್ವ ವ್ಯಾಪಕವಾದುದು.

ಮಾಹೇಶ್ವರೀ ಶಕ್ತಿಯು ಓಂಕಾರ ಸ್ಥಾನದಿಂದಲೇ ಉದಯಿಸಿ ಮೂಲಾಧಾರ ಚಕ್ರದವರೆಗೂ ಪ್ರಸರಿಸಿಕೊಂಡು ಪುನಃ ಬಂದು ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರದಲ್ಲಿ ನೆಲೆಸುವುದು. ಕೌಮಾರೀ ಶಕ್ತಿಯು ಓಂಕಾರದಿಂದಲೇ ಉದಯಿಸಿ ಮೂಲಾಧಾರಚಕ್ರದವರಿಗೂ ಪ್ರಸರಿಸಿ ಪುನಃ ಬಂದು ಕಂಠದಲ್ಲಿರುವ ವಿಶುದ್ಧಚಕ್ರದಲ್ಲಿ ನೆಲೆಸುವುದು. ವೈಷ್ಣವೀಶಕ್ತಿಯು ಓಂಕಾರ ಸ್ಥಾನದಿಂದಲೇ ಉದಯಿಸಿ ಮೂಲಾಧಾರ ಚಕ್ರದವರಿಗೂ ಪ್ರಸರಿಸಿ ಪುನಃ ಬಂದು ಎದೆಗೆ ಸರಿಯಾಗಿ ಬೆನ್ನಿನ ಹುರಿಯಲ್ಲಿರುವ ಅನಾಹತಚಕ್ರದಲ್ಲಿ ನೆಲೆಸುವುದು. ವಾರಾಹೀಶಕ್ತಿಯು ಓಂಕಾರ ಸ್ಥಾನದಿಂದಲೇ ಉದಯಿಸಿ ಮೂಲಾಧಾರಚಕ್ರದವರೆಗೂ ವ್ಯಾಪಿಸಿ, ಪುನಃ ಬಂದು ಮಣಿಪೂರಕ ಚಕ್ರದಲ್ಲಿ ನೆಲೆಸುವುದು. ಇಂದ್ರಾಣೀಶಕ್ತಿಯು ಓಂಕಾರ ಸ್ಥಾನದಿಂದಲೇ ಉದಯಿಸಿ ಮೂಲಾಧಾರಚಕ್ರದವರೆಗೂ ವ್ಯಾಪಿಸಿ ಪುನಃ ಬಂದು ಸ್ವಾಧಿಷ್ಠಾನಚಕ್ರದಲ್ಲಿ ನೆಲೆಸುವುದು. ಚಾಮುಂಡೇಶ್ವರೀಶಕ್ತಿಯು ಓಂಕಾರ ಸ್ಥಾನದಿಂದಲೇ ಉದಯಿಸಿ ಮೂಲಾಧಾರಚಕ್ರಕ್ಕೆ ಬಂದು ಅಲ್ಲೇ ನೆಲೆಸುವುದು.

ಮೇಲೆ ತಿಳಿಸಿರುವಂತೆ ಸಪ್ತಮಾತೃಕಾಶಕ್ತಿಗಳು ಸುಷುಮ್ನಾನಾಡಿಯೊಳಗೆ ತಮ್ಮ ತಮ್ಮ ಸ್ಥಾನಗಳಲ್ಲಿ ನೆಲೆಸಿ, ದೇಹದ ಸೃಷ್ಟಿಯನ್ನು ಮಾಡಿಕೊಂಡು

ವ್ಯಾಪಾರಕ್ಕೂ ಪ್ರಕಾಶಕಗಳಾಗಿವೆ. ಮೋಕ್ಷಮಾರ್ಗದಲ್ಲಿಯೇ ತಮ್ಮ ತಮ್ಮ ಸ್ಥಾನಗಳಿಂದ ಮೇಲಕ್ಕೆ ಚಲಿಸಿ ಓಂಕಾರ ಸ್ವರೂಪವಾದ ಬ್ರಹ್ಮವನ್ನು ಸೇರುವುವು. ಹೀಗೆ ತಮ್ಮ ತಮ್ಮ ಸ್ಥಾನಗಳಲ್ಲಿ ನೆಲೆಸಿರುವ ಸಪ್ತಮಾತೃಕಾಶಕ್ತಿಗಳು ಯಾವ ಯಾವ ಅಕ್ಷರ ಶಕ್ತಿಗಳಾಗಿರುತ್ತವೊ ಅದನ್ನು ಚಿತ್ರದಲ್ಲಿ ಬರೆದಿದೆ. ಅಲ್ಲದೆ ಸಪ್ತಸ್ವರಗಳನ್ನೂ ಸಪ್ತ ವ್ಯಾಹೃತಿಗಳನ್ನೂ, ಓಂಕಾರದ ಅಕಾರ, ಉಕಾರ, ಮಕಾರಗಳನ್ನೂ, ಪಂಚ ಕೋಶಕ್ಕೆ ಪ್ರಧಾನವಾದ ಸ್ಥಳಗಳನ್ನೂ ಚಿತ್ರದಲ್ಲಿ ಬರೆದಿದೆ.

ಸಪ್ತಮಾತೃಕೆಯರಲ್ಲಿ ಬ್ರಾಹ್ಮೀ, ಮಾಹೇಶ್ವರೀ, ವೈಷ್ಣವೀ ಅಂದರೆ ಚತುರ್ಮುಖ ಬ್ರಹ್ಮ, ಈಶ್ವರ, ವಿಷ್ಣು, ಈ ಮೂರು ಶಕ್ತಿಗಳೂ ಪ್ರಧಾನವನ್ನು ವಹಿಸಿ ಇತರ ಮಾತೃಕಾಶಕ್ತಿಗಳನ್ನು ತಮ್ಮ ಪಂಗಡಗಳಿಗೆ ಹಂಚಿಕೊಂಡಿರುತ್ತಾರೆ. ಇದರಂತೆ ಸಪ್ತವ್ಯಾಹೃತಿಗಳಲ್ಲೂ ಎಲ್ಲಾ ವ್ಯಾಹೃತಿಗಳ ತತ್ವಗಳ ಸಂಜ್ಞಾರೂಪವಾಗಿ **ಭೂಃ, ಭುವಃ, ಸುವಃ** ಎಂಬುದನ್ನು ಪ್ರಧಾನವಾದದ್ದನ್ನಾಗಿ ವೇದದಲ್ಲಿ ವಿಂಗಡಮಾಡಿದೆ. ಇದರಂತೆ ಸಂಗೀತ ಶಾಸ್ತ್ರದಲ್ಲೂ ಸಪ್ತಸ್ವರಗಳನ್ನು ಷಡ್ಜ, ಮಧ್ಯಮ, ಗಾಂಧಾರ ಎಂಬ ಗ್ರಾಮತ್ರಯವಾಗಿ ವಿಂಗಡಿಸಿದೆ. ಆದುದರಿಂದ ಮಾಹಾಚಮಸ್ಯನು **ಭೂಃ, ಭುವಃ, ಸುವಃ** ಎಂಬ ಮೂರು ವ್ಯಾಹೃತಿಗಳನ್ನು ಇಟ್ಟುಕೊಂಡು ತತ್ವಗಳನ್ನು ಹೇಳಿರುವುದು. ಓಂಕಾರದಲ್ಲಿನ ಅಕಾರ, ಉಕಾರ, ಮಕಾರಗಳ ವಿಭಾಗದ ತತ್ವಗಳಿಗೆ ಅನುಸಾರವಾಗಿಯೇ ಇರುವುದು. ಈ ಮೂರು ವಿಭಾಗಗಳಲ್ಲಿ ಯಾವ ಯಾವ ತತ್ವಗಳಿವೆಯೋ ಅವನ್ನು ಕೆಳಗೆ ಬರೆದಿರುವುದು.

| **ಭೂಃ** | **ಭುವಃ** | **ಸುವಃ** | **ಮಹಃ** |
|---|---|---|---|
| ಅಕಾರ | ಉಕಾರ | ಮಕಾರ | ಓಂಕಾರ |
| ವಿರಾಟ್‌ಸ್ವರೂಪ | ಹಿರಣ್ಯಗರ್ಭ | ಈಶ್ವರ | ,, |
| ವಿಶ್ವ | ತೈಜಸ | ಪ್ರಾಜ್ಞ | ,, |
| ಜಾಗ್ರತ್ | ಸ್ವಪ್ನ | ಸುಷುಪ್ತಿ | ,, |
| ಚತುರ್ಮುಖ ಬ್ರಹ್ಮ | ವಿಷ್ಣು | ರುದ್ರ | ,, |
| ಬಿಂದು | ನಾದ | ಕಳಾ | ,, |
| ಹ್ರಸ್ವ | ಧೀರ್ಘ | ಪ್ಲುತ | ,, |
| ಸೃಷ್ಟಿ | ಸ್ಥಿತಿ | ಲಯ | ,, |
| ಭೂಮಿ | ಅಂತರಿಕ್ಷ | ಸ್ವರ್ಗ | ,, |
| ಋಗ್ವೇದ | ಯಜುರ್ವೇದ | ಸಾಮವೇದ | ,, |
| ಗಾರ್ಹಪತ್ಯಾಗ್ನಿ | ದಕ್ಷಿಣಾಗ್ನಿ | ಆಹವನೀಯ | ,, |
| ಪ್ರಾತಃಕಾಲ | ಮಧ್ಯಾಹ್ನ | ಸಾಯಂಕಾಲ | ,, |
| ಬ್ರಹ್ಮಗ್ರಂಥಿ | ವಿಷ್ಣುಗ್ರಂಥಿ | ರುದ್ರಗ್ರಂಥಿ | ,, |

ಸಪ್ತ ವ್ಯಾಹೃತಿಗಳಲ್ಲಿ ಭೂಃ ಮುಂತಾದ ಆರು ವ್ಯಾಹೃತಿಗಳಿಗೂ ಕೊನೆಯಲ್ಲಿ ವಿಸರ್ಗವಿದೆ. ಅಂತಿಮ ವ್ಯಾಹೃತಿಯಾದ ಸತ್ಯಂ ಪದದ ಕೊನೆಯಲ್ಲಿ ಬಿಂದು ಅಥವಾ ಅನುಸ್ವಾರವಿದೆ.

ಈ ವ್ಯಾಹೃತಿಗಳಲ್ಲಿರುವ ಅನುಸ್ವಾರದ ತತ್ವವೇನು ವಿಸರ್ಗದ ತತ್ವವೇನು ಎಂಬುದನ್ನು ತಿಳಿಯೋಣ. ಓಂಕಾರಸ್ವರೂಪವಾದ ಪರಬ್ರಹ್ಮದಿಂದ ಉದಯಿಸಿದ ಅಕ್ಷರಕ್ಕೆಲ್ಲಾ ಪ್ರಥಮಾಕ್ಷರವಾದ "ಅ" ಅಕ್ಷರವೇ ಅನುಸ್ವಾರವನ್ನು ಹೊಂದಿ "ಅಂ" ಎನಿಸಿಕೊಳ್ಳುವುದು ಮತ್ತು ವಿಸರ್ಗವನ್ನು ಹೊಂದಿ "ಅಃ" ಎನಿಸಿಕೊಳ್ಳುವುದು. "ಅಂ-ಅಃ" ಈ ಎರಡು ಅಕ್ಷರಗಳು ಹದಿನಾರು ಸ್ವರಾಕ್ಷರಗಳೊಳಗೆ ಪ್ರತ್ಯೇಕಸ್ಥಾನವನ್ನು ಪಡೆದಿವೆ. "ಅಂ" ಎನ್ನುವುದೇ ದೇವತಾತ್ಮಕವಾದ ಜ್ಞಾನಶಕ್ತಿ. "ಅಃ" ಎನ್ನುವುದೇ ದೇವತಾತ್ಮಕವಾದ ಕ್ರಿಯಾಶಕ್ತಿ. ಅಂ ಎನ್ನುವ ಅಕ್ಷರವೇ ನಿವೃತ್ತಿಯೆಂದರೆ ಲಯ ಅಥವಾ ಮೋಕ್ಷಮಾರ್ಗದ ಶಕ್ತಿಯಾಗಿರುವುದು. ಅಃ ಎನ್ನುವ ಅಕ್ಷರವೇ ಪ್ರವೃತ್ತಿ ಎಂದರೆ ಪ್ರಪಂಚದ ಸೃಷ್ಟಿ, ಸ್ಥಿತಿಗಳ ಕಾರ್ಯಗಳನ್ನುಂಟು ಮಾಡುವ ಶಕ್ತಿಯಾಗಿರುವುದು. ಈ ವಿಸರ್ಗದ ತತ್ವವನ್ನು ಭಗವದ್ಗೀತಾ ಎಂಟನೇ ಅಧ್ಯಾಯದಲ್ಲಿ ಶ್ರೀ ಕೃಷ್ಣ ಪರಮಾತ್ಮನು ಹೇಳಿರುವ "**ಭೂತ ಭಾವೋದ್ಭವ ಕರೋ ವಿಸರ್ಗಃ ಕರ್ಮಸಂಜ್ಞಿತಃ**" ಅಂದರೆ ಪಂಚಭೂತಗಳ ಅಂದರೆ ಜಗತ್ತಿನ ಉತ್ಪತ್ತಿ ಮತ್ತು ಅಭಿವೃದ್ಧಿಯ ಕಾರ್ಯರೂಪವಾದ ಯಜ್ಞಗಳು ವಿಸರ್ಗ ಶಬ್ದದಿಂದ ಹೇಳಲ್ಪಡುವುವು.

ವಿಸರ್ಗವೆನಿಸುವ "ಅಃ" ಅಕ್ಷರವು "ಅ" ಅಕ್ಷರದಿಂದ ಪ್ರಾರಂಭವಾಗಿ ಅಕ್ಷರಕ್ಕೆಲ್ಲಾ ಕೊನೆಯದಾದ "ಹ" ಅಕ್ಷರದವರಿಗೆ ಇರುವ ಎಲ್ಲಾ ಅಕ್ಷರಗಳನ್ನು ತನ್ನೊಳಗೆ ಅಡಕಮಾಡಿಕೊಂಡು ಕೊನೆಯ ಅಕ್ಷರವಾದ ಹ ಅಕ್ಷರದೊಡನೆ ಸೇರಿ "ಅಹ" ರೂಪವಾದ ಸ್ಪಂದನವಾಗಿ ವ್ಯಾಪಕವಾಗಿರುವ ಸ್ಥಳವೇ ಅವಕಾಶ ಅಥವಾ ಆಕಾಶವೆನಿಸುವುದು. ವಿಸರ್ಗವು ಕೊನೆಯ ಅಕ್ಷರವಾದ ಹ ಅಕ್ಷರವನ್ನು ಸೇರಿ ಅಹ ಯಾವಾಗ ಆಗುವುದೊ, ಆಗ ಜ್ಞಾನಶಕ್ತಿಯಾದ 'ಅಂ" ಅಕ್ಷರವೂ ವ್ಯಾಪಿಸಿಕೊಂಡು 'ಅಹ' ಅಕ್ಷರವನ್ನು ತನ್ನೊಳಗೆ ಅಡಗಿಸಿಕೊಂಡು "ಅಹಂ" ನಾನು ಎಂಬ ಜ್ಞಾನರೂಪವಾಗುವುದು. "ಅಹಂ" ಜ್ಞಾನವು ವ್ಯಾಪಿಸಿ ನಿಲ್ಲುವ ಸ್ಥಳವೇ ಆಕಾಶಾಂತರ್ಗತವಾದ ಕಳಾರೂಪವಾಗಿರುವುದು. ಅಂದರೆ ಬಿಂದುನಾದ ಕಳೆಗಳಲ್ಲಿ ಕಳಾಸ್ಥಾನವಾಗಿದೆ. ಕಳಾ ಎಂಬ ಪದಕ್ಕೆ ಅರ್ಥವೇನೆಂದರೆ "**ಮಧುರೇ ಶ್ರುತಿಸುಖೇ ಅಸ್ಫುಟೇ ಅವ್ಯಕ್ತಾಕ್ಷರೇ ಧ್ವನೌ ಕಲಃ**". ಮಧುರವಾಗಿಯೂ ಶ್ರೋತ್ರಕ್ಕೆ ಸುಖವಾಗಿಯೂ ಅಸ್ಫುಟವಾಗಿಯೂ ಅವ್ಯಕ್ತವಾದ ವರ್ಣಗಳುಳ್ಳದ್ದಾಗಿಯೂ ಇರುವ ಧ್ವನಿಗೆ ಕಳಾ ಎಂದು ಹೆಸರು. ಇಂತಹ ಧ್ವನಿಯು ಸೂಕ್ಷ್ಮವಾಗಿರುವುದಕ್ಕೆ ಕಾಕಲಿ ಎಂದು ಹೆಸರು. "**ಕಂ ಸುಖಂ ಲಾ ತೀತಿ ಕಲಃ**" ಸುಖವನ್ನೀಯುವು

ದೆಂದರೆ ಆನಂದವನ್ನೀಯುವುದು, ಸೌಂದರ್ಯವನ್ನುಂಟುಮಾಡುವುದು, ಮತ್ತು ಶಕ್ತಿ ಸ್ವರೂಪವಾದುದು. ಇಂತಹ ಕಳಾಸ್ಥಿತಿಯಲ್ಲಿರುವ "ಅಹಂ" ಜ್ಞಾನವು ಶುದ್ಧಸತ್ವ ಗುಣಸ್ವರೂಪವಾದುದು. ಅಂದರೆ ಶುದ್ಧಸತ್ವಪ್ರಧಾನ ಮಾಯಾಸ್ವರೂಪವೆನಿಸಿ ಈಶ್ವರೀಶಕ್ತಿಯಾಗಿದೆ. ಇಂತಹ ಶಕ್ತಿಯಲ್ಲಿ ಪರಬ್ರಹ್ಮನು ಪ್ರತಿಫಲಿಸಿ ಈಶ್ವರನೆನಿಸಿ ಕೊಂಡಿರುವನು.

ಅಕ್ಷರಗಳಲ್ಲಿ ಹದಿನಾರು ಸ್ವರಾಕ್ಷರಗಳು **"ಸ್ವತೋರಂಜಯಂತೀತಿ ಸ್ವರಾಃ"** ಎಂಬ ಅರ್ಥದಂತೆ ಸ್ವಪ್ರಕಾಶವಾದವುಗಳಾಗಿ ಶುದ್ಧ ಸತ್ವಗುಣಕ್ಕೆ ಸೇರಿದವುಗಳಾಗಿವೆ. ವ್ಯಂಜನಾಕ್ಷರಗಳಲ್ಲಿ ಕೆಲವು ಮಲಿನ ಸತ್ವಗುಣಕ್ಕೂ ಕೆಲವು ರಜೋಗುಣಕ್ಕೂ ಕೆಲವು ತಮೋಗುಣಕ್ಕೂ ಸೇರಿವೆ. ಮುಖ್ಯವಾಗಿ,

> **ಆತ್ಮನ ಆಕಾಶಸ್ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ ।**
> **ಅಗ್ನೇರಾಪಃ । ಅದ್ಭ್ಯಃ ಪೃಥಿವೀ ।**

ಎಂದು ಈ ಉಪನಿಷತ್ತಿನ ಆನಂದವಲ್ಲಿಯಲ್ಲಿ ಹೇಳಿರುವಂತೆ ವಿಸರ್ಗ ಅಂದರೆ ಅಃ ಅಕ್ಷರಶಕ್ತಿಯು ಇತರ ಎಲ್ಲಾ ಅಕ್ಷರ ಶಕ್ತಿಗಳನ್ನೂ ಕೂಡಿಕೊಂಡು ಮತ್ತು ಸಪ್ತ ಮಾತೃಕಾಶಕ್ತಿಗಳೊಡಗೂಡಿ ಕಳಾದಿಂದ ಓಂಕಾರ ನಾದರೂಪವಾಗಿ ಬೆಳೆದು ಅನಂತರ ಓಂಕಾರನಾದದಿಂದ ಬಿಂದುವೆಂದರೆ ಪಂಚಭೂತಾತ್ಮಕವಾದ ಜಗತ್ತನ್ನೂ ಪ್ರಾಣಿಗಳನ್ನೂ ಸೃಷ್ಟಿಸುವುದು. ಹೀಗೆ "ಅಹಃ" ಶಕ್ತಿಯು ಜಗತ್ತನ್ನು ಸೃಷ್ಟಿಸಿ ಜಗತ್ತು ಸ್ಥಿತಿಯನ್ನು ಹೊಂದಲು **ಆದಿಶೇಷಶಕ್ತಿಯಾಗಿ** ಜಗತ್ತನ್ನು ಧರಿಸಿಕೊಂಡಿದೆ. ಮನುಷ್ಯ ಶರೀರವನ್ನು ಸೃಷ್ಟಿಸಿಕೊಂಡು ಅನಂತರ ಶರೀರವನ್ನು ಧರಿಸಿರುವುದಕ್ಕೋಸ್ಕರ ವಿಸರ್ಗಶಕ್ತಿಯೇ **ಶ್ರೀಕುಂಡಲಿನೀ** ಶಕ್ತಿರೂಪದಲ್ಲಿ ಮೂಲಾಧಾರಚಕ್ರದಲ್ಲಿರುವುದು.

ಪ್ರಥಮದಿಂದಲೂ ಇದುವರೆಗೂ ವಿವರಿಸಿಕೊಂಡು ಬಂದಿರುವಂತೆ **"ಓಂ ಮಿತೀದಗ್ಂ ಸರ್ವಮ್"** ಎಂಬ ಈ ಉಪನಿಷದ್ವಾಕ್ಯಕ್ಕೆ ಅನುಸಾರವಾಗಿ ಸರ್ವವೂ ಓಂಕಾರ ಸ್ವರೂಪವಾದ ಪರಬ್ರಹ್ಮವಾಗಿದೆ. "ಓಂ ಇತಿ ಬ್ರಹ್ಮ" ಮತ್ತು "ಓಂ **ಇತ್ಯೇಕಾಕ್ಷರಂ ಬ್ರಹ್ಮ"** ಎಂಬುದಾಗಿಯೂ ಉಪನಿಷತ್ತಿನಲ್ಲಿ ಹೇಳಿದೆ. **'ಓಂ'** ಎಂಬ ಏಕಾಕ್ಷರದಲ್ಲಿ ಏನೇನು ಮಹತ್ವವಿದೆಯೊ ಅದನ್ನು ತಿಳಿದುಕೊಳ್ಳೋಣ. **'ಓಂ'** ಎಂಬ ಏಕಾಕ್ಷರದಲ್ಲಿ ಓ ಅಕ್ಷರ ಮತ್ತು ಬಿಂದು ಇದೆ. **'ಓಂ'ಕಾರವನ್ನು** ಬಿಡಿಸಿದರೆ **ಅ, ಉ, ಮ,** ಂ, ಅಂದರೆ ಮೂರು ಅಕ್ಷರಗಳು ಮತ್ತು ಅನುಸ್ವಾರವೂ ಇರುವುವು. **ಅ, ಉ, ಮ,** ಸೇರಿದರೆ ಓಂಕಾರವಾಗುವುದೆಂದು ತಿಳಿಯಬಾರದು. ಜೊತೆಯಲ್ಲಿ ಬಿಂದುವು ಇದ್ದರೇನೇ ಓಂಕಾರವಾಗುವುದು. ಅ ಕಾರವು **ಉಕಾರದಲ್ಲಿ**

ಸೇರಿದರೆ ಓ ಕಾರವಾಗುವುದು. ಓ ಕಾರದ ಜೊತೆಗೆ **'ಮ'** ಸೇರಿದರೆ **"ಓಮ"** ಆಗುವುದು. ಆದುದರಿಂದ ಜೊತೆಗೆ ಅನುಸ್ವಾರವು ಬಂದೇ ಬರಬೇಕು. **ಮ** ಅಕ್ಷರ ವನ್ನು ಅರ್ಧಾಕ್ಷರಮಾಡಿಕೊಂಡರೆ **ಮ್** ಎಂದಾಗಿ ನಾದದ ಕಳಾರೂಪವಾಗುವುದಿಲ್ಲ. ಅಲ್ಲದೆ ಅರ್ಧಾಕ್ಷರಕ್ಕೆ ಬೆಲೆಯೇ ಇರುವುದಿಲ್ಲ. ಮತ್ತು **"ಓಮ್"** ಎನ್ನುವುದು ಶಾಸ್ತ್ರಸಮ್ಮತವೂ ಅಲ್ಲ. ಆದುದರಿಂದ "ಓ" ಕಾರದ ಜೊತೆಗೆ ಅನುಸ್ವಾರದ ಶಬ್ದ ಪ್ರವಾಹ ಇದ್ದರೇನೇ ಓಂ ಕಾರವೆನಿಸುವುದು. ಏಕಾಕ್ಷರವಾದ ಓಂ ಕಾರದಲ್ಲಿ ಅಡಗಿರುವ **ಅ, ಉ, ಮ, ಂ,** ಗಳು ಪರಬ್ರಹ್ಮದ ಸಚ್ಚಿದಾನಂದ ತತ್ವವನ್ನೇ ಪ್ರತಿ ಪಾದಿಸುತ್ತವೆ. ಈ ತತ್ವಸಮರ್ಥನೆಗೆ ಅಕ್ಷಮಾಲಿಕೋಪನಿಷತ್ತಿನಲ್ಲಿ,

**ಓಂ ಅಂಕಾರ ಮೃತ್ಯುಂಜಯ ಸರ್ವವ್ಯಾಪಕ ಪ್ರಥಮೇಕ್ಷೇ ಪ್ರತಿತಿಷ್ಠ ।**
**ಓಂ ಉಂಕಾರ ಸರ್ವಬಲಪ್ರದ ಸಾರತರ ಪಂಚಮೇಕ್ಷೇ ಪ್ರತಿತಿಷ್ಠ ।**
**ಓಂ ಮಕಾರ ವಿದ್ವೇಷಿ ಮೋಹನಕರ ಏಕಚತ್ವಾರಿಂಶೇಕ್ಷೇ ಪ್ರತಿತಿಷ್ಠ ।**

ಓಂಕಾರದಲ್ಲಿನ ಅಕಾರವು ಯಾವ ವಿಕಾರಕ್ಕೂ ಸೇರದ ಅವ್ಯಕ್ತ ಸ್ವರೂಪ ಮತ್ತು ಸರ್ವವ್ಯಾಪಕವಾದುದೂ ಆಗಿರುವುದರಿಂದ ಪರಬ್ರಹ್ಮದ ಸತ್ಸ್ವರೂಪವಾದ ಅದ್ವಿತೀಯವನ್ನೇ ಪ್ರತಿಪಾದಿಸುವುದು. ಉಕಾರವು ಸರ್ವಬಲಕ್ಕೂ ಬೀಜರೂಪ ವಾಗಿಯೂ ತುಂಬಿತುಳುಕುತ್ತಿರುವ ಸ್ವಯಂಪ್ರತಿಭೆಯುಳ್ಳದ್ದಾಗಿಯೂ ಇರುವುದ ರಿಂದ ಪರಬ್ರಹ್ಮದ ಚಿತ್ಸ್ವರೂಪವನ್ನೇ ಪ್ರತಿಪಾದಿಸುವುದು. ಮ ಕಾರವು ದ್ವೇಷ ರಹಿತವಾಗಿಯೂ ಆನಂದಪರವಶದ ಬೀಜವಾಗಿಯೂ ಇರುವುದರಿಂದ ಪರಬ್ರಹ್ಮದ ಆನಂದತ್ವವನ್ನೇ ಪ್ರತಿಪಾದಿಸುವುದು ಎಂದು ಹೇಳಿದೆ.

ಓಂಕಾರದಲ್ಲಿರುವ **ಅನುಸ್ವಾರ** (ಂ) ವು ಶ್ರೀಶಂಕರಭಗವತ್ಪಾದಾಚಾರ್ಯ ರವರು ಶ್ರೀ ಲಲಿತಾ ತ್ರಿಶತೀ ಭಾಷ್ಯದಲ್ಲಿ **"ಬಿಂದುಃ ಸರ್ವಪ್ರಕೃತಿ ಭೂತ ಶಬಾ ರ್ಥಾತ್ಮಕತಯಾ"** ಅಂದರೆ ಬಿಂದುವು ಸರ್ವಪ್ರಕೃತಿಗಳ ಬೀಜರೂಪವು ಎಂದು ಹೇಳು ತ್ತಾರೆ. ಬಿಂದುವೆಂದರೆ ಒಂದು ಚುಕ್ಕೆ ಅಥವಾ ಸೊನ್ನೆ. "ಅಣೋರಣೀಯಾನ್ ಮಹತೋ ಮಹೀಯಾನ್" ಎಂಬ ಶ್ರುತಿ ಪ್ರಮಾಣದಂತೆ ಅಣುವಿಗೆ ಅಣುವಾಗಿಯೂ ಮಹತ್ತಿಗೆ ಮಹತ್ತಾಗಿಯೂ ಬಿಂದುವು ಇರುವುದು. ಸಾಸುವೆ ಕಾಳಿಗಿಂತ ಅತಿ ಸೂಕ್ಷ್ಮವಾಗಿರುವ ಬಿಂದುವು ಮಹತ್ತರವಾದ ಪರ್ವತಾಕಾರವಾಗಬಹುದು. ಪರ್ವತಾಕಾರವಾಗಿರುವ ಬಿಂದುವು ಅಣುವಿಗೆ ಅಣುವಾಗುವುದು. ಇದರಂತೆ ಪರ ಬ್ರಹ್ಮಶಕ್ತಿಯು ಮಹತ್ತರವಾದ ಜಗದಾಕಾರವಾಗುವುದು. ಜಗತ್ತು ಲಯವನ್ನು ಅನುಸರಿಸಿ ಅಣುವಿಗೆ ಅಣುವಾದ ಶಕ್ತಿರೂಪವಾಗಿ ಪರಬ್ರಹ್ಮರೂಪವಾಗುವುದು. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದಾಚಾರ್ಯರವರು ಶ್ರೀ ಲಲಿತಾ ತ್ರಿಶತೀ ಭಾಷ್ಯದಲ್ಲಿ,

**"ಅನುಸ್ವಾರಃ ತಸ್ಮಿನ್ನೇವ ಪದಾರ್ಥೇ। ಅಭಿನ್ನನಿಮಿತ್ತೋಪಾದಾನೇ ಲಯಂವಕ್ತಿ"**

ಅಂದರೆ ಅನುಸ್ವಾರವು ಪರಬ್ರಹ್ಮದಲ್ಲೇ ಅಭಿನ್ನವಾದ ನಿಮಿತ್ತವನ್ನು ಸ್ವೀಕರಿಸುವುದರ ದೆಸೆಯಿಂದ ಲಯವನ್ನು ಸೂಚಿಸುತ್ತದೆ ಎಂದು ಹೇಳಿರುತ್ತಾರೆ. ಅನುಸ್ವಾರವಿಲ್ಲದೇ ಇದ್ದರೆ ಓಂಕಾರವೆನಿಸುವುದೇ ಇಲ್ಲ. ಮೇಲನ ವಿವರಣೆಯಿಂದ **ಓಂಕಾರದಲ್ಲಿ**ರುವ ಅನುಸ್ವಾರವು ಸರ್ವಪ್ರಕೃತಿಗಳಿಗೂ ಬೀಜರೂಪವಾಗಿಯೂ ಪರಬ್ರಹ್ಮವೇ ಆಗಿಯೂ ಸೃಷ್ಟಿ ಮತ್ತು ಲಯ ಸೂಚಕವಾಗಿಯೂ ಇರುವುದು. ಸಪ್ತವ್ಯಾಹೃತಿಗಳಲ್ಲಿ **ಸತ್ಯಂ** ಎಂಬುದರಲ್ಲಿ ಇರುವ ಅನುಸ್ವಾರವೂ ಮೇಲಿನ ತತ್ವಪ್ರತಿಪಾದಕವಾಗಿರುವುದರಿಂದ **ಸತ್ಯಂ** ಎಂಬುದು ಸತ್ ಸ್ವರೂಪವಾದ ಪರಬ್ರಹ್ಮವೇ ಆಗಿರುವುದು. ಇದುವರಿಗೂ ವಿವರಿಸಿಕೊಂಡು ಬಂದಿರುವ ತತ್ವದಂತೆ ಸರ್ವವೂ **ಓಂಕಾರ** ಸ್ವರೂಪವಾಗಿರುವುದು.

## ೬ನೇ ಪ್ರಕರಣ

## ಓಂಕಾರೋಪಾಸನೆಯಲ್ಲಿ "ಬಿಂದು" ಸೋಪಾನ

೬ನೇ ಪ್ರಕರಣದಲ್ಲಿರುವ ವಿಷಯಗಳು [ಓಂಕಾರೋಪಾಸನೆಯ ಅನುಷ್ಠಾನಕ್ಕೆ ಅರ್ಹತೆ ಮತ್ತು ಸಲಕರಣೆ. ಓಂಕಾರೋಪಾಸನೆಯ ಅನುಷ್ಠಾನದ ಪ್ರಥಮದಲ್ಲಿ ಮೂಲಾಧಾರಚಕ್ರದಲ್ಲಿರುವ ಅಗ್ನಿಯು ಪ್ರಜ್ವಲನೆಯಾಗುವ, ಅಪಾನವಾಯುವು ಊರ್ಧ್ವಮುಖವಾಗುವ, ಶ್ರೀ ಕುಂಡಲಿನೀಶಕ್ತಿಯು ಉತ್ಥಾಪಿತವಾಗಿ ಸುಷುಮ್ನಾನಾಡಿಯೊಳಕ್ಕೆ ಪ್ರವೇಶಿಸುವ,ಅವಿದ್ಯಾ ಶಕ್ತಿಗಳು ನಿಗ್ರಹವಾಗುವ ಮತ್ತು ಭ್ರೂಮಧ್ಯದಲ್ಲಿ ಪ್ರಾತಃಕಾಲದ ಸೂರ್ಯಬಿಂಬದಂತೆ ಗೋಚರಿಸುವ ತೇಜೋಬಿಂದುವನ್ನು ಧರಿಸಿ ಧ್ಯಾನಮಾಡುವ ವಿಷಯಗಳು ಇರುವುವು.]

ಎಂಟನೆ ಅನುವಾಕದ ಮಂತ್ರದ ಕೊನೆಯಲ್ಲಿ—

**ಓಮಿತಿ ಬ್ರಾಹ್ಮಣಃ ಪ್ರವಕ್ಷ್ಯನ್ನಾಹ ಬ್ರಹ್ಮೋಪಾಪ್ನ**
**ವಾನೀತಿ। ಬ್ರಹ್ಮೈವೋಪಾಪ್ನೋತಿ।**

ಅಂದರೆ ಬ್ರಾಹ್ಮಣನು ಓಂ ಎಂದು ಉಚ್ಚರಿಸಿ ಧ್ಯಾನಮಾಡುತ್ತಾನೆ. ಅಂತಹವನು ಓಂಕಾರೋಚ್ಚಾರಣೆಯಿಂದ ಧ್ಯಾನಮಾಡಿ ಬ್ರಹ್ಮವನ್ನು ಪಡದೇ ಪಡೆಯುತ್ತಾನೆ. ಅಂದರೆ ತನ್ನನ್ನು ತಾನೇ ಹೊಂದುತ್ತಾನೆ. ಎಂದು ಹೇಳಿರುವುದರಿಂದ ಓಂಕಾರೋಚ್ಚಾರಣೆಯಿಂದ ಧ್ಯಾನಮಾಡಿ ಬ್ರಹ್ಮವನ್ನು ಹೊಂದುವ ಕ್ರಮವು ೬, ೭, ೮, ೯ ಈ ನಾಲಕ್ಕು ಪ್ರಕರಣದಲ್ಲೂ ಬರುವುದು. ಇದನ್ನು ಒಂದೊಂದಾಗಿ ವಿವರಿಸೋಣ.

ಓಂಕಾರೋಪಾಸನೆಯ ಧಾನ್ಯಾನುಷ್ಠಾನಕ್ಕೆ ಅಧಿಕಾರಿಯಾಗಲು ಐದನೇ ಅನುವಾಕದ ಮಂತ್ರದ ವಿವರಣೆಯಲ್ಲಿ ಬಂದಿರುವ ವಿಚಾರಗಳ ತತ್ವಗಳನ್ನೆಲ್ಲಾ ಚೆನ್ನಾಗಿ ತಿಳಿದಿರಬೇಕು. ನಮ್ಮಲ್ಲಿರುವ ಅನ್ನಮಯ, ಪ್ರಾಣಮಯ, ಮನೋಮಯ ವಿಜ್ಞಾನಮಯ, ಆನಂದಮಯ ಈ ಐದು ಕೋಶಗಳ ಕಾರ್ಯಗಳೂ ಪ್ರಪಂಚ ವ್ಯವಹಾರೋನ್ಮುಖಗಳಾಗಿವೆ. ಪ್ರಪಂಚ ವ್ಯವಹಾರೋನ್ಮುಖಗಳಾಗಿರುವ ಈ ಐದು ಕೋಶಗಳ ಕಾರ್ಯಗಳನ್ನು ಪಾರಮಾರ್ಥಿಕವಾದ ಅಂತರ್ಮುಖವಮಾರ್ಗಕ್ಕೆ ತಿರುಗಿಸಿ ಓಂಕಾರೋಚ್ಚಾರಣೆಯ ಜೊತೆಗೆ ಸೇರಿಸಿಕೊಂಡು ಧ್ಯಾನಮಾಡಬೇಕು.

ಅನ್ನಮಯಕೋಶವೆಂದರೆ ಸ್ಥೂಲದೇಹಕ್ಕೆ ಹಿತವಾಗಿಯೂ ಮಿತವಾಗಿಯೂ ಕಾಲಕ್ಕೆ ಸರಿಯಾಗಿ ಸಾತ್ವಿಕಾಹಾರವನ್ನು ಸೇವಿಸುತ್ತಾ ಪ್ರಾಣಾಯಾಮದಿಂದ ದೇಹದಲ್ಲಿರುವ ತಮೋಗುಣ, ರಜೋಗುಣದ ಜಡತ್ವವನ್ನು ನಿವಾರಿಸಿ ಸತ್ವಗುಣಾವಲಂಬನವಾದದ್ದನ್ನಾಗಿ ಮಾಡಿಕೊಳ್ಳಬೇಕು. ಓಂಕಾರ ಧ್ಯಾನಮಾಡಲು ಬದ್ಧಪದ್ಮಾಸನ ಅಥವಾ ಸ್ವಸ್ತಿಕಾಸನದಲ್ಲಿ ಧೀರ್ಘಕಾಲ ಕೂತಿರಲು ಸ್ಥೂಲದೇಹವು ಅರ್ಹತೆಯನ್ನು ಪಡೆಯಬೇಕು. ಪ್ರಾಣಮಯ ಕೋಶವೆಂದರೆ ಶ್ವಾಸೋಚ್ಛ್ವಾಸ ಮತ್ತು ಪಂಚಪ್ರಾಣಗಳ ಕಾರ್ಯಗಳನ್ನು ಬಾಹ್ಯ ವ್ಯಾಪಾರೋನ್ಮುಖದಿಂದ ತಪ್ಪಿಸಿ ಓಂಕಾರೋಪಾಸನೆಗೆ ಸಹಕರಿಸಲು ಗುರುಮುಖದಿಂದ ತಿಳಿದುಕೊಂಡು ಪ್ರಾಣಾಯಾಮಾಭ್ಯಾಸಮಾಡಿ, ಶ್ವಾಸೋಚ್ಛ್ವಾಸವನ್ನು ಸಮಸ್ಥಿತಿಗೆ ತಂದುಕೊಳ್ಳಬೇಕು. ಅಲ್ಲದೆ ಆನಂದವಲ್ಲಿಯಲ್ಲಿ **"ಪೃಥಿವೀ ಪುಚ್ಛಂ ಪ್ರತಿಷ್ಠಾ"** ಎಂಬ ಪ್ರಾಣಮಯ ಕೋಶದ ಮಂತ್ರದ ಭಾಷ್ಯದಲ್ಲಿ ಪೃಥಿವೀತತ್ವವಾದ ಮೂಲಾಧಾರಚಕ್ರದಲ್ಲಿ ಪೃಥಿವೀದೇವತೆಯು ಅಧ್ಯಾತ್ಮಿಕವಾದ ಪ್ರಾಣವನ್ನು ಧರಿಸಿಕೊಂಡಿರುವುದರಿಂದ ದೇಹವು ಸಾಯದೆ ಸ್ಥಿತಿಯಲ್ಲಿರುವುದಕ್ಕೆ ಕಾರಣವಾಗಿದೆ, ಎಂದು ಶ್ರೀ ಶಂಕರಭಗವತ್ಪಾದಾಚಾರ್ಯರವರು ಹೇಳಿರುತ್ತಾರೆ. ಈ ಧರಿಸಿಕೊಂಡಿರುವ ಶಕ್ತಿಯೇ ದೇವತಾತ್ಮಕವಾದ **ವಿಸರ್ಗಾಕ್ಷರದ (ಅಃ)** ಶಕ್ತಿಯಾಗಿದೆ. ಈ ಶಕ್ತಿಗೆ **ಶ್ರೀ ಕುಂಡಲಿನೀಶಕ್ತಿಯೆಂದೂ** ಉಪನಿಷತ್ತಿನಲ್ಲಿ ಹೇಳಿದೆ. ಈ ಶಕ್ತಿಯು ದೇಹವ್ಯಾಪಾರನಡೆಯಲು ಮೂಲಾಧಾರಚಕ್ರದಲ್ಲಿ ಸುಷುಮ್ನಾನಾಡಿಯ ಬಾಗಿಲನ್ನು ಮುಚ್ಚಿಕೊಂಡು ಸೂರ್ಯಚಂದ್ರನಾಡಿಗಳ ಮೂಲಕ ದೇಹವ್ಯಾಪಾರವನ್ನು ಮಾಡಿಸುತ್ತಿದೆ. ಶ್ರೀ ದೇವಿಯನ್ನು ಪ್ರಾರ್ಥಿಸುತ್ತಾ ಪ್ರಾಣಾಯಾ

ಮದಿಂದ ಸುಷುಮ್ನಾನಾಡಿಯ ಬಾಗಿಲನ್ನು ತೆಗಿಸಬೇಕು. ಮೇಲಿನ ಕಾರ್ಯಗಳಾದರೆ ಪ್ರಾಣಮಯಕೋಶವು ಮೋಕ್ಷಮಾರ್ಗಕ್ಕೆ ಸಹಕಾರಿಯಾದಂತಾಗುವುದು.

ಮನಸ್ಸು ಅವಿದ್ಯೆಯಿಂದ ವಿಷಯಾಭಿಲಾಷೆಯುಳ್ಳದ್ದಾಗಿ ಮನೋಮಯ ಕೋಶದ ಮೂಲಕ ಇಂದ್ರಿಯಗಳನ್ನು ಪ್ರೇರಿಸಿ ಇಂದ್ರಿಯಗಳಿಂದ ಕಾರ್ಯಮಾಡಿಸುವುದು. ಈ ರೀತಿ ದೇಹವ್ಯಾಪಾರಮಾಡಿಸುವ ಮನಸ್ಸು ವಿಷಯಾದಿಗಳಲ್ಲಿ ತೀವ್ರತಮವಾದ ವಿರಕ್ತಿಯನ್ನು ಹೊಂದಿ ಇಂದ್ರಿಯಗಳನ್ನು ಕಾರ್ಯಕ್ಕೆ ಪ್ರೇರೇಪಿಸದೆ, ಮೋಕ್ಷಮಾರ್ಗದಲ್ಲಿರುವ ಬುದ್ಧಿಯ ಜ್ಞಾನಾನುವರ್ತಿಯಾಗಿದ್ದರೆ, ಮನೋಮಯಕೋಶವು ಮೋಕ್ಷಮಾರ್ಗಕ್ಕೆ ಸಹಕಾರಿಯಾದಂತಾಗುವುದು. ಬುದ್ಧಿಯಜ್ಞಾನವು ವಿಜ್ಞಾನಮಯಕೋಶದ ಮೂಲಕ ದೇಹ ತಾನೆಂಬ ಜ್ಞಾನ ಮತ್ತು ಹೊರಗಿನ ವಿಷಯಾದಿ ಮಿಥ್ಯಾಜ್ಞಾನಗಳಲ್ಲಿದ್ದು ದೇಹ ವ್ಯಾಪಾರೋನ್ಮುಖವಾಗಿರುವುದು. ದೇಹ ಮತ್ತು ಹೊರಗಿನ ವಿಷಯಗಳು ಮಿಥ್ಯವಾದವುಗಳು. ದೇಹ ನಾನಲ್ಲ ಪರಬ್ರಹ್ಮವೇ ನಾನೆಂಬ ದೃಢತರವಾದ ಜ್ಞಾನದಿಂದ ಓಂಕಾರೋಚ್ಚಾರಣೆಯ ಮೂಲಕ ಧ್ಯಾನಮಾಡಿ ಪರಬ್ರಹ್ಮನಲ್ಲಿ ಲೀನವಾಗಬೇಕು. ಪರಮಾತ್ಮ ಸಾಕ್ಷಾತ್ಕಾರವನ್ನು ಹೊಂದುವ ಸ್ವಾರ್ಥತೆಯೊಂದೇ ಚಿತ್ತಕ್ಕೆ ಇರಬೇಕು. ದೇಹ ಮತ್ತು ಹೊರಗಿನ ಪದಾರ್ಥಗಳಲ್ಲಿ ಅಭಿಮಾನ ತೊರೆದು ಸಾಕ್ಷಾತ್ಕಾರ ಹೊಂದುವ ಅಭಿಮಾನದಲ್ಲಿ ಅಹಂಕಾರ ನಿರತವಾಗಿರಬೇಕು. ಆನಂದಮಯಕೋಶವು ದೇಹವ್ಯಾಪಾರದಲ್ಲಿ ವಿಷಯಾದಿಗಳಲ್ಲಿ ಪ್ರೀತಿ ಸಂತೋಷಗಳನ್ನುಂಟುಮಾಡುವುದು. ವಿಷಯಾದಿಗಳಲ್ಲಿನ ಪ್ರೀತಿ ನಶಿಸಬೇಕು. ಪರಮಾತ್ಮನಲ್ಲಿ ಪರಮ ಪ್ರೀತಿಯೆಂದರೆ ಪರಾಭಕ್ತಿಯನ್ನು ಹೊಂದಿ ಮೋಕ್ಷದ ಬಯಕೆಯುಳ್ಳಿರುವ ಬುದ್ಧಿಯಜ್ಞಾನಕ್ಕೆ ಸಹಾಯಕವಾಗಿರಬೇಕು. ಮೇಲೆ ತಿಳಿಸಿರುವ ಐದು ಕೋಶಗಳ ಕಾರ್ಯಗಳೂ ಒಂದಕ್ಕೊಂದು ಹೊಂದಿಕೊಂಡು ಏಕೀಭವಿಸಿ ಅವಿದ್ಯೆಯನ್ನು ದಂಡಿಸಿ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯಲು ಸಹಾಯಕಗಳಾಗಬೇಕು. ಆನಂದವಲ್ಲಿಯಲ್ಲಿ ತಿಳಿಸಿರುವ ಅನ್ನಮಯಾದಿ ಪಂಚಕೋಶಗಳ ವಿಚಾರಗಳು ಮೇಲೆ ವಿವರಿಸಿರುವ ತತ್ವಕ್ಕೆ ಅನುಸಾರವಾಗಿವೆ.

ಓಂಕಾರೋಪಾಸನೆಗೆ ಬೇಕಾದ ಸಲಕರಣೆಗಳನ್ನು ಮೇಲೆಯೂ ತಿಳಿಸಿದೆ. ಮತ್ತು ಐದನೇ ಅನುವಾಕದ ಮಂತ್ರದ ವಿವರಣೆಯಲ್ಲೂ ಬರೆದಿದೆ. ಓಂಕಾರೋಪಾಸನೆಯ ಕ್ರಮವನ್ನು ತಕ್ಕಮಟ್ಟಿಗೆ ಇಲ್ಲಿ ವಿವರಿಸಿದರೂ, ಗುರೂಪದೇಶಪಡೆದು ಅನುಷ್ಠಿಸಬೇಕು. ಅಧಿಕಾರಿಯು ಪದ್ಮಸಿದ್ಧಾಸನಗಳಲ್ಲಿ ಯಾವುದಾದರೂ ಒಂದು ಆಸನದಲ್ಲಿ ಕೂತುಕೊಂಡು, ಸಮಕಾಯನಾಗಿ ತುಟಿಮುಚ್ಚಿಕೊಂಡು, ಮೂಲಾಧಾರಚಕ್ರದಿಂದಲೂ ಎಳೆತ ಬರುವಂತೆ ಒಳಗೇ 'ಓಂ' ಎಂಬ ವರ್ಣವನ್ನು ಕಂಠದೊಳಗೆ ಉಚ್ಚರಿಸುತ್ತಾ, ಅದನ್ನು ಮೇಲಕ್ಕೆ ಶಿರಸ್ಸಿನ ಕಡೆಗೆ ತೆಗೆದುಕೊಂಡುಹೋಗಿ ಭ್ರೂಮಧ್ಯ

ದೊಳಗೆ ಸಿಲ್ಲಿಸಿಕೊಂಡು, ಭ್ರೂಮಧ್ಯದಲ್ಲಿ ಗೋಚರವಾಗುವ ತೇಜಸ್ಸನ್ನು ಧರಿಸಿಕೊಂಡು, ಆ ತೇಜಸ್ಸಿನ ಉಪಾಸನೆ ಮಾಡಬೇಕೆಂದರೆ ಆ ತೇಜಸ್ಸಿನಲ್ಲಿ ನಿರತನಾಗಬೇಕು. ಅಭ್ಯಾಸದ ಪ್ರಥಮಾವಸ್ಥೆಯಲ್ಲಿ ಮೂಲಾಧಾರಚಕ್ರದಿಂದ ಓಂಕಾರದ ಎಳೆತ ಚೆನ್ನಾಗಿ ಬರುವುದಿಲ್ಲ. ಅಲ್ಲದೆ ಭ್ರೂಮಧ್ಯದಲ್ಲಿ ತೇಜಸ್ಸು ಚೆನ್ನಾಗಿ ಗೋಚರವಾಗುವುದಿಲ್ಲ. ಅಭ್ಯಾಸ ಮಾಡುತ್ತಾ ಬಂದರೆ ಪ್ರಾತಃಕಾಲದ ಕಿರಣರಹಿತವಾದ ಕೆಂಪಾದ ಸೂರ್ಯಮಂಡಲದಂತೆ ದುಂಡಾದ ತೇಜೋ ಬಿಂದುವು ಭ್ರೂಮಧ್ಯದಲ್ಲಿ ಗೋಚರಿಸುವುದು. ಇದೇ ಬಿಂದು ನಾದ ಕಳೆಗಳಲ್ಲಿ ಬಿಂದುಸೋಪಾನ.

ಆರನೇ ಅನುವಾಕದ ಮಂತ್ರದಲ್ಲಿ **'ಭೂರಿತ್ಯಗ್ನೌ ಪ್ರತಿತಿಷ್ಠತಿ'** ಎಂದು ಹೇಳಿರುವುದರ ತತ್ವವನ್ನು ಸೊಪಲು ವಿವರಿಸಬೇಕಾಗಿದೆ. **'ಭೂರಿತ್ಯಗ್ನೌ ಪ್ರತಿತಿಷ್ಠತಿ'** ಎಂಬ ಮಂತ್ರಕ್ಕೆ **ಭೂಃ** ಎಂಬ ವ್ಯಾಹೃತಿರೂಪನಾದ ಯಾವ ಅಗ್ನಿಯು ಮಹತ್ತಾದ ಬ್ರಹ್ಮಕ್ಕೆ ಅಂಗವಾಗಿರುವನೊ ಆ ಅಗ್ನಿಯಲ್ಲಿ ನಿಲ್ಲುವನು, ಎಂದು ಭಾಷ್ಯದಲ್ಲಿ ಇದೆ. **'ಅಗ್ನಿಃ ಪೂರ್ವರೂಪಮ್ । ಆದಿತ್ಯ ಉತ್ತರ ರೂಪಮ್ ।** ಎಂಬ ಈ ಉಪನಿಷತ್ಪ್ರಮಾಣದಂತೆ ಕಿರಣರಹಿತವಾದ ಸೂರ್ಯನ ಪ್ರಥಮ ರೂಪವು ಅಗ್ನಿ. ಜಗತ್ಸೃಷ್ಟಿಯಲ್ಲಿ ಸೂರ್ಯನು ಪ್ರಥಮದಲ್ಲಿ ಅಗ್ನಿರೂಪದಿಂದಿದ್ದು ಕಿರಣಗಳೊಡಗೂಡಿ ಸೂರ್ಯನೆನಿಸಿಕೊಳ್ಳುತ್ತಾನೆ. ಇದರಂತೆ ಪ್ರಾತಃಕಾಲದಲ್ಲಿ ಉದಯಿಸುತ್ತಿರುವ ಸೂರ್ಯನು ಕಿರಣಪ್ರಸಾರವಿಲ್ಲದ್ದರಿಂದ ದುಂಡಾದ ಅಗ್ನಿರೂಪದಲ್ಲಿರುತ್ತಾನೆ. ಅನುಷ್ಠಾನದಲ್ಲಿ ಅಗ್ನಿಯು ಅಧಿಕಾರಿಗೆ ಭ್ರೂಮಧ್ಯದಲ್ಲಿ ಕಿರಣ ರಹಿತವಾದ ತೇಜೋಬಿಂದುರೂಪನಾಗಿ ಪ್ರಥಮದಲ್ಲಿ ಗೋಚರಿಸಿರುವನು.

ಐದನೇ ಅನುವಾಕದ ಮಂತ್ರದಲ್ಲಿ **'ಭೂರಿತಿವಾ ಅಗ್ನಿಃ'** ಎಂಬುದರ ವಿವರಣೆಯಲ್ಲಿ ಭೂತತ್ವವಾದ ಮೂಲಾಧಾರಚಕ್ರದಲ್ಲಿ ಗಾರ್ಹಪತ್ಯಾಗ್ನಿ ಅನಾಹತಚಕ್ರದಲ್ಲಿ ದಕ್ಷಿಣಾಗ್ನಿ ಆಜ್ಞಾಚಕ್ರದಲ್ಲಿ ಆಹವನೀಯಾಗ್ನಿಗಳು ಇರುತ್ತವೆಯೆಂದು ಶ್ರುತಿ ಪ್ರಮಾಣದೊಡನೆ ತಿಳಿಸಿರುತ್ತಷ್ಟೆ. ಓಂಕಾರೋಚ್ಚಾರಣೆಯಿಂದ ಧ್ಯಾನ ಮಾಡುವುದರಲ್ಲಿ ಈ ಮೂರು ಅಗ್ನಿಗಳೂ ಪ್ರಜ್ವಲನೆಯಾಗುವುವು. ಪ್ರಾಣಾಗ್ನಿಹೋತ್ರೋಪನಿಷತ್ತಿನಲ್ಲಿ **'ಸ್ವಶರೀರೆ-ಯಜ್ಞಂ ಪರಿವರ್ತಯಾಮೀತಿ'** ಎಂಬುದಾಗಿ ಹೇಳಿರುವಂತೆಯೂ ಮತ್ತು ಪಾಶುಪತಬ್ರಹ್ಮೋಪನಿಷತ್ತಿನಲ್ಲಿ,

> **ತ್ರೇತಾಗ್ನ್ಯನು ಸಂಧಾನೋ ಯಾಗಃ । ತ್ರೇತಾಗ್ನ್ಯಾತ್ಮಾಕೃತಿ ವರ್ಣೋಂಕಾರ ಹಂಸಾನು ಸಂಧಾನೋಽಂತರ್ಯಾಗಃ ॥**

ಎಂಬುದಾಗಿ ಹೇಳಿರುವಂತೆಯೂ ಓಂಕಾರಾನು ಸಂಧಾನದಿಂದ ಹಂಸಸ್ವರೂಪನಾದ ಪರಮಾತ್ಮನನ್ನು ಹೊಂದುವುದೇ ನಮ್ಮಲ್ಲಿರುವ ಮೂರು ಅಗ್ನಿಗಳನ್ನು ಪ್ರಜ್ವಲಿ

ಸುವ ಅಂತರ್ಯಾಗವೆನಿಸುವುದು. ಓಂಕಾರದ ವಿಭಾಗವಾದ **ಅ, ಉ, ಮ,** ತತ್ಪ್ರವಾದ **ವಿಶ್ವ, ತೈಜಸ, ಪ್ರಾಜ್ಞ**ರಲ್ಲಿ ವಿಶ್ವತ್ವಕ್ಕೆ ಪ್ರಧಾನವಾದ ಸ್ಥಳವು ಮೂಲಾಧಾರ ಚಕ್ರವು. ಈ ಸ್ಥಳದಲ್ಲಿರುವ ಅಗ್ನಿಗೆ ವೈಶ್ವಾನರಾಗ್ನಿಯೆಂದು ಹೆಸರಿದೆ. ಸಾಧಾರಣವಾದ ಎಲ್ಲಾ ಮನುಷ್ಯರಲ್ಲೂ ಈ ಅಗ್ನಿಯು ಪ್ರಜ್ವಲನೆಯಾಗಿರುವುದಿಲ್ಲ. ಕಾರಣವೇನೆಂದರೆ ಪರಾಶಕ್ತಿಯಾದ ವಿಸರ್ಗ (ಅಃ) ಶಕ್ತಿಯು ಅಂದರೆ ಶ್ರೀಕುಂಡಲಿನೀ ಶಕ್ತಿಯು ದೇಹವನ್ನು ಸೃಷ್ಟಿಸಿಕೊಂಡು, ದೇಹವನ್ನು ವ್ಯಾಪಾರೋನ್ಮುಖವಾಗಿ ಇಟ್ಟಿರಲು, ಮೂಲಾಧಾರಚಕ್ರದಲ್ಲಿ ಸುಷುಮ್ನಾನಾಡಿಯು ಬಾಗಿಲನ್ನು ಮುಚ್ಚಿಕೊಂಡು, ಅಲ್ಲಿರುವ ಅಗ್ನಿಯನ್ನು ಪ್ರಜ್ವಲಿಸದಿರುವಂತೆ ತಡೆದಿರುತ್ತೆ. ಯಾರು ಆ ಪರಾಶಕ್ತಿಯನ್ನು ಪ್ರಾರ್ಥಿಸುತ್ತಾ ಪ್ರಾಣಾಯಾಮದಿಂದ ಮುಚ್ಚಿರುವ ಸುಷುಮ್ನಾನಾಡಿಯ ಬಾಗಿಲನ್ನು ತೆಗೆಸುತ್ತಾರೊ, ಅಂತಹವರು ಮೂಲಾಧಾರದಲ್ಲಿರುವ ಅಗ್ನಿಯನ್ನು ಪ್ರಜ್ವಲನೆ ಮಾಡಬಲ್ಲರು. ಕೆಳಗಿನ ಶ್ರುತಿವಾಕ್ಯವು ಮೇಲಿನ ತತ್ವವನ್ನು ಸಮರ್ಥಿಸುವುದು.

**ಅಷ್ಟ ಪ್ರಕೃತಿರೂಪಾ ಸಾ ಸಾಷ್ಟಧಾ ಕುಂಡಲೀ ಕೃತಾ ।**
**ಯಥಾವದ್ವಾಯು ಸಾರಂಚ ಜ್ವಲನಾದಿಚ ನಿತ್ಯಶಃ ।**
**ಪರಿತಃ ಕಂದಪಾರ್ಶ್ವೇಷು ನಿರುಧ್ಯೈವ ಸದಾಸ್ಥಿತಾ ।**
**ಸ್ವಮುಖೇನ ಸಮಾವೇಷ್ಟ್ಯ ಬ್ರಹ್ಮರಂಧ್ರ ಮುಖಂ ತಥಾ ।**
**ಯೋಗಕಾಲೇನಮರುತಾ ಸಾಗ್ನಿನಾ ಬೋಧಿತಾ ಸತಿ ।**
**ಸ್ಫುರಿತಾ ಹೃದಯಾಕಾಶೆ ನಾಗರೂಪಾ ಮಹೋಜ್ವಲಾ ।**

**ತಾತ್ಪರ್ಯ**—ಅಷ್ಟಪ್ರಕೃತಿರೂಪವಾಗಿಯೂ ಅಷ್ಟವಿಧವಾಗಿಯೂ ಇರುವ ಶ್ರೀಕುಂಡಲಿನೀಶಕ್ತಿಯು ಕುಂಡಲಾಕಾರವಾಗಿದೆ. ಆ ಶಕ್ತಿಯು ಕಂದಪಾರ್ಶ್ವದಲ್ಲಿ ಸುತ್ತಲೂ ವಾಯುವಿನ ಸಾರವನ್ನೂ, ಅಗ್ನಿಯ ಜ್ವಾಲೆಯನ್ನೂ ತಡೆದುಕೊಂಡು ಬ್ರಹ್ಮರಂಧ್ರದ ದ್ವಾರವನ್ನು ತನ್ನ ಮುಖದಿಂದ ಮುಚ್ಚಿಕೊಂಡು ಯಾವಾಗಲೂ ಇರುತ್ತದೆ. ಯೋಗಕಾಲದಲ್ಲಿ ಆ ಶಕ್ತಿಯು ಅಗ್ನಿಯಿಂದಲೂ ವಾಯುವಿನಿಂದಲೂ ಎಬ್ಬಿಸಲ್ಪಟ್ಟು ಹೃದಯಾಕಾಶವಾದ ಸುಷುಮ್ನೆಯಲ್ಲಿ ಸ್ಫುರಣೆಗೊಂಡು ಪ್ರಕಾಶಮಾನವಾದ ನಾಗರೂಪಳಾಗಿರುತ್ತಾಳೆ.

ಈ ಮೇಲಿನ ವಾಕ್ಯವು ತ್ರಿಶಿಖಿಬ್ರಾಹ್ಮಣೋಪನಿಷತ್, ಯೋಗಕುಂಡಲ್ಯುಪನಿಷತ್, ದರ್ಶನೋಪನಿಷತ್ ಆದ ಮೂರು ಉಪನಿಷತ್ತುಗಳಲ್ಲೂ ಇದೆ. ಆರನೇ ಅನುವಾಕದ ಮಂತ್ರದಲ್ಲಿರುವ '**ಭೂರಿತ್ಯಗ್ನೌ ಪ್ರತಿತಿಷ್ಠತಿ**' ಎಂಬುದರ ತತ್ವವನ್ನು

ತಕ್ಕಮಟ್ಟಿಗೆ ಮೇಲೆ ತಿಳಿಸಿತು ಈಗ ಅದರ ಮುಂದಿನ ಮಂತ್ರವೇ **'ಭುವ ಇತಿ ವಾಯೌ'** ಎಂದು ಇದೆ. ಇದರ ತತ್ವವು ವಾಯುವಿನಿಂದ ಅಗ್ನಿಯು ಪ್ರಜ್ವಲನೆಯಾಗಿ ಜ್ವಾಲೆಯು ಮೂಲಾಧಾರಚಕ್ರದಿಂದ ಮೇಲ್ಮುಖವಾಗಿ ಹೋಗುವಿಕೆಯನ್ನು ಪ್ರತಿಪಾದಿಸುವುದು. ಈ ತತ್ವವನ್ನು ಕೆಳಗಿನ ಯೋಗಶಿಖೋಪನಿಷತ್ತಿನ ವಾಕ್ಯವು ಸಮರ್ಥಿಸುವುದು.

**ಗುದಮೇಢ್ರಾಂತರಾಳಸ್ಥಂ ಮೂಲಾಧಾರ ತ್ರಿಕೋಣಕಂ ।**
**ಯಸ್ಮಾದುತ್ಪದ್ಯತೇವಾಯು ರ್ಯಸ್ಮಾದ್ವಹ್ನಿ ಪ್ರವರ್ತತೇ ॥**

**ತಾತ್ಪರ್ಯ**—ಗುದಸ್ಥಾನ ಮತ್ತು ರಹಸ್ಯ ಸ್ಥಾನದ ಮಧ್ಯದಲ್ಲಿರುವ ತ್ರಿಕೋಣಾಕಾರವಾದ ಮೂಲಾಧಾರಚಕ್ರವು ವಾಯುವಿನಿಂದ ಪೀಡಿತವಾದ ಮಾತ್ರದಲ್ಲಿಯೇ ಅಗ್ನಿಯು ಸ್ಫುಟವಾಗುವುದು. ಅಲ್ಲದೆ ಶ್ರೀಶಂಕರಭಗವತ್ಪಾದಾಚಾರ್ಯರವರು ಯೋಗತಾರಾವಳಿಯಲ್ಲಿ,

**ಉತ್ಥಾಪಿತಾಧಾರ ಹುತಾಶನೋಲ್ಕೈ ।**
**ರಾ ಕುಂಚ ನೈಶ್ಶಕ್ಷದಪಾನವಾಯೋಃ ।**

ಅಂದರೆ ಮೂಲಾಧಾರದಿಂದ ಅಗ್ನಿಜ್ವಾಲೆಯನ್ನು ಅಪಾನ ವಾಯುವಿನಿಂದ ಮೇಲಕ್ಕೆ ಏಳುವಂತೆ ಮಾಡಿ ಎಂಬ ವಾಕ್ಯವೂ **'ಭುವ ಇತಿ ವಾಯೌ'** ಎಂಬುದರ ತತ್ವವನ್ನು ಸಮರ್ಥಿಸುವುದು. ಮೂಲಾಧಾರಚಕ್ರದಿಂದಲೂ ಎಳೆಯಲ್ಪಟ್ಟು ಪ್ರಾರಂಭವಾದ ಓಂಕಾರ ವರ್ಣೋಚ್ಚಾರಣೆಯನ್ನು ಒಳಗಡೆಯೇ ಕಂಠದಮೂಲಕ ಭ್ರೂಮಧ್ಯಪ್ರದೇಶದವರೆಗೆ ತೆಗೆದುಕೊಂಡು ಹೋಗಿ ನಿಲ್ಲಿಸಿಕೊಂಡು, ಅಲ್ಲಿ ಗೋಚರವಾಗುವ ಪ್ರಾತಃಕಾಲದ ಕಿರಣ ರಹಿತವಾದ ಸೂರ್ಯನಂತೆ ಪ್ರಕಾಶಿಸುವ ತೇಜೋಬಿಂದುವನ್ನು ಧರಿಸಿಕೊಂಡು ಧ್ಯಾನಮಾಡಬೇಕೆಂದು ಹಿಂದೆ ತಿಳಿಸಿತಷ್ಟೆ. ಮೂಲಾಧಾರಚಕ್ರದಿಂದ ತೇಜೋಬಿಂದುವಿನವರಿಗೂ ಓಂಕಾರ ವರ್ಣೋಚ್ಚಾರಣೆಯು ಒಂದು ಕಂಭದಂತೆ ಅಥವಾ ಸೇತುವೆಯಂತೆ ಏಕಾಕಾರವಾಗಿರುವುದು. ಆದ್ದರಿಂದ ತೇಜೋಬಿಂದುವಿಗೆ ಪೀಠಸ್ಥಾನವು ಮೂಲಾಧಾರಚಕ್ರವಾಗಿದೆ. ಅಂದರೆ ಮೂಲಾಧಾರದಲ್ಲಿರುವ ಶ್ರೀಕುಂಡಲಿನೀಶಕ್ತಿಯೆ ತೇಜೋಬಿಂದುವಿಗೆ ಪೀಠರೂಪವಾಗಿದೆ. ಈ ಮೇಲಿನ ತತ್ವವನ್ನು ಕೆಳಗಿನ ಯೋಗಶಿಖೋಪನಿಷತ್ತಿನ ವಾಕ್ಯವು ಸಮರ್ಥಿಸುವುದು.

**ಶಿವಶಕ್ತಿಮಯಂ ಮಂತ್ರಂ ಮೂಲಾಧಾರಾತ್ಸಮುತ್ಥಿತಂ ।**
**ಮಹಾಮಾಯಾ ಮಹಾಲಕ್ಷ್ಮೀ ಮಹಾದೇವೀ ಸರಸ್ವತೀ ।**

**ಆಧಾರಶಕ್ತಿರವ್ಯಕ್ತಾ ಯಯಾ ವಿಶ್ವಂ ಪ್ರವರ್ತತೇ ।**
**ಸೂಕ್ಷ್ಮಾಭಾ ಬಿಂದುರೂಪೇಣ ಪೀಠರೂಪೇಣ ವರ್ತತೇ ।**

**ತಾತ್ಪರ್ಯ**—ಶಿವಶಕ್ತಿಸ್ವರೂಪವಾದ ಪ್ರಣವೋಚ್ಚಾರಣೆಯ ಮಂತ್ರವು ಮೂಲಾಧಾರಚಕ್ರದಿಂದ ಉತ್ಪನ್ನವಾಗುವುದು. ಓಂಕಾರಸ್ವರೂಪವಾದ ಯಾವ ಶಕ್ತಿಯಿಂದ ಈ ಪ್ರಪಂಚಕ್ಕೆ ಪ್ರವರ್ತಿಯುಂಟಾಗುವುದೊ ಆ ಶಕ್ತಿಯೆ ಮಹಾ ಮಾಯಾ, ಮಹಾಲಕ್ಷ್ಮೀ, ಮಹಾದೇವೀ ; ಮಹಾ ಸರಸ್ವತೀ ಎನಿಸಿಕೊಳ್ಳುವುದು.

ಓಂಕಾರವರ್ಣೋಚ್ಚಾರಣೆಯು ಎಳೆತವು ಅಭ್ಯಾಸದ ಪ್ರಥಮಾವಸ್ಥೆಯಲ್ಲಿ ಮೂಲಾಧಾರಚಕ್ರದಿಂದ ಚೆನ್ನಾಗಿ ಬರುವುದಿಲ್ಲ. ಭ್ರೂಮಧ್ಯದಲ್ಲಿ ತೇಜೋಬಿಂದುವು ಚೆನ್ನಾಗಿ ಗೋಚರವಾಗುವುದಿಲ್ಲ. ಅಭ್ಯಾಸ ಮಾಡುತ್ತಾಮಾಡುತ್ತಾ ಕ್ರಮೇಣ ಸರಿಯಾಗುವುದು. ತೇಜೋಬಿಂದುವನ್ನು ಬುದ್ಧಿವೃತ್ತಿಯು ಧರಿಸಿಕೊಂಡು ಬಿಂದುವೇ ತಾನೆಂದು ಧ್ಯಾನಮಾಡುತ್ತಾ ಬರಬೇಕು. ಬುದ್ಧಿಯು ಈ ರೀತಿ ಧ್ಯಾನ ಮಾಡುವುದಕ್ಕೆ ಮನಸ್ಸು ವಿರಕ್ತಿಯನ್ನು ಹೊಂದಿ ಬುದ್ಧಿಯನ್ನು ಸಹಕರಿಸಿಕೊಂಡು ಜೊತೆಯಲ್ಲಿರಬೇಕು. ಶ್ವಾಸೋಚ್ಛ್ವಾಸವು ಓಂಕಾರದ ಅಗ್ರಭಾಗವಾದ ಬಿಂದುವಿನಲ್ಲಿ ನಿಲುಗಡೆಯಾಗಿ ನಿಂತಿರಬೇಕು. ವ್ಯಾನವಾಯುವು ದೇಹವನ್ನು ಧರಿಸುವಂತೆ ಓಂಕಾರೋಚ್ಚಾರಣೆಯ ರೂಪವಾದ ಕಂಭವನ್ನು ಹಿಡಿದು ನಿಲ್ಲಿಸಿರಬೇಕು.

ಆದರೆ ಈ ಮೇಲಿನ ಸಲಕರಣೆಗಳನ್ನು ರಜಸ್ತಮೋಗುಣಗಳಾದ ಅವಿದ್ಯಾಶಕ್ತಿಗಳು ಶಿಥಿಲಮಾಡಿ ಬಹಿರ್ಮುಖಕ್ಕೆ ಬಲವಾಗಿ ಎಳೆಯುತ್ತವೆ. ರಜೋಗುಣದಲ್ಲಿ ಪ್ರಬಲವಾದ ಅನೇಕ ಶಕ್ತಿಗಳಿವೆ. ಕಾಮ, ಕ್ರೋಧ, ಲೋಭ, ದಂಭ, ಅಸೂಯಾ, ಅಹಂಕಾರ, ಈರ್ಷ್ಯಾ, ಮಾತ್ಸರ್ಯ, ವಿಷಯಾದಿಗಳನ್ನು ಅನುಭವಿಸುವ ಮೋಹ, ತೃಷ್ಣ, ಮದ, ನಾಸ್ತಿಕತೆ ಮುಂತಾದ ಪ್ರಬಲ ಶಕ್ತಿಗಳಿವೆ. ಅಲ್ಲದೆ ರಜೋಗುಣದ ಪ್ರಧಾನಶಕ್ತಿಯು ವಿಷಯವಾಸನೆಯನ್ನು ಬುದ್ಧಿಮನಸ್ಸುಗಳಿಗೆ ತಂದೊಡ್ಡಿ ಬುದ್ಧಿಮನಸ್ಸುಗಳನ್ನು ಇಂದ್ರಿಯಗಳ ಮೂಲಕ ಬಾಹ್ಯಕ್ಕೆ ಪ್ರಬಲವಾಗಿ ಎಳೆಯುತ್ತದೆ. ತಮೋಗುಣದಲ್ಲೂ ಅನೇಕ ಪ್ರಬಲವಾದ ಶಕ್ತಿಗಳಿವೆ. ಮಿಥ್ಯವಾದ್ದನ್ನು ಸತ್ಯವಾಗಿ ತಿಳಿಯುವ ಭ್ರಾಂತಿ ಸ್ವರೂಪವಾದ ಶಕ್ತಿ, ಅಂಧಕಾರ, ನಿದ್ರಾ, ಅಜ್ಞಾನಾವರಣ, ಮೂರ್ಛಾ, ಸೋಮಾರಿತನ, ಮಾನ್ದ್ಯ, ಮೂಢತ್ವ, ಮೋಹ, ಶೋಕ, ದುಃಖ, ಮುಂತಾದ ಅನೇಕ ಶಕ್ತಿಗಳಿವೆ. ಬಾಹ್ಯವ್ಯಾಪಾರದಲ್ಲಿ ಈ ಶಕ್ತಿಗಳ ಮಹತ್ವಗಳು ಪ್ರಕಟವಾಗುವುದು ಸರ್ವರಿಗೂ ಗೊತ್ತಿದೆ.

ವಿದ್ಯೆಗೂ ಅವಿದ್ಯೆಗೂ ಬದ್ಧವೈರತ್ವ. ವಿದ್ಯೆಯು ಮಾರ್ಗವನ್ನು ಅನುಸರಿಸಿ ಬುದ್ಧಿ, ಮನಸ್ಸು, ಪ್ರಾಣಗಳು ಅಂತರ್ಮುಖದ ಮಾರ್ಗದಲ್ಲಿ ಹೋಗಲು ಪ್ರಯತ್ನ

ಮಾಡುತ್ತವೆ. ರಜಸ್ತಮೋಶಕ್ತಿಗಳು ಪ್ರಾಪಂಚಿಕ ವ್ಯಾಪಾರದಲ್ಲೇ ನಿರತವಾಗಿರಲು ಬಾಹ್ಯಕ್ಕೆ ಎಳೆಯುತ್ತವೆ. ರಜೋಗುಣವು ಬಾಹ್ಯ ವ್ಯಾಪಾರದಲ್ಲಿ ಕ್ರಿಯಾ ಶೌರ್ಯತ್ವವನ್ನು ಕೊಡುವುದು. ಅಂತರ್ಮುಖದ ದಾರಿಗೆ ಬದ್ಧದ್ವೇಷ. ಕಾರಣವೇನೆಂದರೆ ದೇಹವ್ಯಾಪಾರವೇ ಲಯವನ್ನು ಹೊಂದಿ ಅವಿದ್ಯೆಯೇ ನಾಶವಾಗುವ ಕಾಲವು ಬಂದಿರುವುದರಿಂದ, ತನ್ನ ಶಕ್ತಿಗಳನ್ನೆಲ್ಲಾ ಪ್ರಯೋಗಮಾಡಿ ಬಾಹ್ಯವ್ಯಾಪಾರಕ್ಕೇ ಎಳೆಯುತ್ತದೆ ಈ ಸೆಳದಾಟದಿಂದ ಬುದ್ಧಿ, ಮನಸ್ಸು ಪ್ರಾಣ, ಎಲ್ಲವೂ ಬಳಲುವುವು. ಇದರಿಂದ ಅನೇಕಾನೇಕಾವರ್ತಿ ಬಹಿರ್ಮುಖವಾಗಿ ಪುನಃ ಪುನಃ ಓಂಕಾರವರ್ಣೋಚ್ಚಾರಣೆಯ ಅನುಸಂಧಾನ ಮಾಡಿಕೊಂಡು ಧ್ಯಾನಮಾಡಬೇಕಾಗುವುದು.

**ಶ್ರವಣಾಯಾಪಿ ಬಹುಭಿರ್ಯೋ ನಲಭ್ಯಃ ।**
**ಶೃಣ್ವಂತೋಽಪಿ ಬಹವೋಯಂ ನವಿದ್ಯುಃ ॥**

**ತಾತ್ಪರ್ಯ**—ಆತ್ಮವಿದ್ಯಾಶ್ರವಣ ಮಾಡುವುದಕ್ಕೂ ಬಹು ಮಂದಿಯೊಳಗೆ ಒಬ್ಬನೂ ದೊರೆಯನು. ಶ್ರವಣಾಧಿಕಾರ ಬರುವುದೂ ಬಹು ಸುಕೃತದ ಫಲವಾಗಿರುತ್ತದೆ. ಬಹು ಜನಗಳು ಶ್ರವಣಮಾಡುವವರಾದರೂ ಎಲ್ಲರೂ ಪರಮಾತ್ಮನನ್ನು ಹೊಂದಲಾರರು ಎಂದು ಕಠೋಪನಿಷತ್ತಿನಲ್ಲಿ ಹೇಳಿರುವಂತೆಯೂ 'ಮಮಮಾಯಾದುರತ್ಯಯಾ' ಎಂಬ ಭಗವದ್ಗೀತಾವಾಕ್ಯದಂತೆಯೂ ಅವಿದ್ಯೆಯನ್ನು ದಂಡಿಸಿ ಉಪಸಂಹರಿಸಿಕೊಳ್ಳುವುದು ಬಹು ಕಷ್ಟ. ಮೋಕ್ಷಾಭಿಲಾಷಿಗಳಾದ ಧೀರರಿಗಲ್ಲದೆ ಇತರರಿಗೆ ಅವಿದ್ಯೆಯನ್ನು ದಂಡಿಸುವುದು ಸಾಧ್ಯವಿಲ್ಲ. ಗುರುಮುಖೇನ ಉಪದೇಶವನ್ನು ಹೊಂದಿ ಶಾಸ್ತ್ರೋಕ್ತವಾದ ದಾರಿಯಲ್ಲಿ ಓಂಕಾರವರ್ಣೋಚ್ಚಾರಣೆಯಿಂದ ತೇಜೋಬಿಂದು ಧಾರಣೆಯನ್ನು ಹೊಂದಿ ಧ್ಯಾನ ಮಾಡುತ್ತಾ ಬರಬೇಕು. ಈ ರೀತಿ ಧ್ಯಾನ ಮಾಡುತ್ತಾ ಬರುವುದರಿಂದ, ಬುದ್ಧಿಮನಸ್ಸಿನ ವೃತ್ತಿಗಳು ಪ್ರಾಣಶಕ್ತಿಗಳೊಡನೆ ಮೆಲ್ಲಮೆಲ್ಲಗೆ ಮೂಲಾಧಾರಚಕ್ರದ ಮೂಲಕ ಸುಷುಮ್ನಾನಾಡಿಯೊಳಗೆ ಪ್ರವೇಶಿಸಿ, ಸುಷುಮ್ನಾನಾಡಿಯೊಳಗೇ ಮೇಲಕ್ಕೆ ಹತ್ತುತ್ತಾ ಸ್ವಾಧಿಷ್ಠಾನ ಚಕ್ರ ಮಣಿಪೂರಚಕ್ರ, ಅನಾಹತಚಕ್ರಗಳನ್ನು ಭೇದಿಸಿಕೊಂಡು ನಿಲ್ಲುವುವು. ಅಂದರೆ ಬುದ್ಧಿ ಮನಸ್ಸಿನ ವೃತ್ತಿಗಳು ಪೃಥಿವೀ ತತ್ವವಾದ ಮೂಲಾಧಾರಚಕ್ರದಿಂದ ಜಲದ ತತ್ವವಾದ ಸ್ವಾಧಿಷ್ಠಾನ ಚಕ್ರವನ್ನು ಸೇರಿ, ಅಲ್ಲಿಂದ ಮೇಲಕ್ಕೆ ಹತ್ತಿ ಅಗ್ನಿ ತತ್ವವಾದ ಮಣಿಪೂರಚಕ್ರವನ್ನು ಸೇರಿ ಅಲ್ಲಿಂದ ಮೇಲಕ್ಕೆ ಹತ್ತಿ, ವಾಯು ತತ್ವವಾದ ಅನಾಹತಚಕ್ರವನ್ನು ಸೇರಿ, ಅಲ್ಲಿಂದ ಮೇಲಕ್ಕೆ ಹೊರಡಲು ಸಿದ್ಧವಾಗಿರುವುವು. ಅನಾಹತ ಚಕ್ರವನ್ನು ಸೇರುವವರೆಗೂ ಮೂಲಾಧಾರದಲ್ಲಿರುವ ಅಗ್ನಿಯು ವಾಯುವಿನಿಂದ ಪ್ರಜ್ವಲಿಸಿ ಜ್ವಾಲೆಯು ಸುಷುಮ್ನಾನಾಡಿಯೊಳಗೇ ಮೇಲ್ಮುಖವಾಗಿ ಸ್ವಾಧಿಷ್ಠಾನ ಮಣಿಪೂರಕ ಚಕ್ರಗಳನ್ನು ದಾಟಿ ಅನಾಹತಚಕ್ರಕ್ಕೆ ಪ್ರವೇಶಿಸುವುದು.

ಈ ಮೇಲಿನ ಅನುಷ್ಠಾನದ ಸೋಪಾನದವರಿಗೂ ಅಂದರೆ ವಾಯು ತತ್ವವಾಗಿ ಪ್ರಾಣಮಯ ಕೋಶಕ್ಕೆ ಪ್ರಧಾನವಾದ ಅನಾಹತಚಕ್ರ ಭೇದನೆಯುವರೆಗೂ **'ಭೂರಿ ತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ ।'** ಎಂಬ ಮಂತ್ರದ ತತ್ವವಾಗಿದೆ. ಮುಂದಿನ ಮಂತ್ರವಾದ **'ಸುವರಾದಿತ್ಯೇ'** ಎಂಬ ಮಂತ್ರವುಓಂಕಾರನಾದದ ತತ್ವವನ್ನು ಪ್ರತಿಪಾದಿಸುವುದು. ಅಂದರೆ ಬಿಂದುನಾದಕಳೆಗಳಲ್ಲಿ ಇದುವರೆಗೂ ಬಿಂದುವಿನ ವಿಚಾರವನ್ನು ತಿಳಿಸಿತು. ಇನ್ನು ಮುಂದೆ ನಾದದ ವಿಚಾರವು ವಿವರಿಸಲ್ಪಡುವುದು. ಇದುವರೆಗೂ ವಿವರಿಸಿದ ಬಿಂದು ಸಹಿತವಾದ **ಓಂಕಾರೋಚ್ಚಾರಣೆಯ** ಉಪಾಸನೆಯ ಮಹತ್ತನ್ನೆಲ್ಲಾ ಮಹನ್ಯಾಸದಲ್ಲಿರುವ ಕೆಳಗಿನ ವೇದಮಂತ್ರವು ಒಳಗೊಂಡಿರುವುದು.

**ಓಂಕಾರಂ ಬಿಂದುಸಂಯುಕ್ತ ನಿತ್ಯಂ ಧ್ಯಾಯಂತಿ ಯೋಗಿನಃ ।**
**ಕಾಮದಂ ಮೋಕ್ಷದಂ ತಸ್ಮಾದೋಂಕಾರಾಯ ನಮೋ ನಮಃ ।**

**ತಾತ್ಪರ್ಯ**– ಬಿಂದು ಸಹಿತವಾದ ಓಂಕಾರವನ್ನು ಬ್ರಹ್ಮನಿಷ್ಠನು ಅನವರತವೂ ಧ್ಯಾನಿಸಲಿ. ಪ್ರಾಪಂಚಿಕದ ಇಷ್ಟಾರ್ಥವನ್ನೂ, ಮೋಕ್ಷವನ್ನೂ ಕೊಡುವುದಾದುದರಿಂದ ಓಂಕಾರ ಸ್ವರೂಪಕ್ಕೆ ನಮಸ್ಕಾರ. ಈ ಮಂತ್ರದಲ್ಲಿ ತಿಳಿಸುವ ಓಂಕಾರವೆಂದರೇನು ಬಿಂದುವೆಂದರೇನು ಇವುಗಳೆರಡನ್ನೂ ಸಂಯುಕ್ತ ಮಾಡುವುದೆಂದರೇನು ಎಂಬ ವಿಚಾರಗಳನ್ನು ವಿಮರ್ಶಿಸಿ ತಿಳಿದುಕೊಂಡು ಅನುಷ್ಠಾನ ಮಾಡಿ ಅನುಭವಕ್ಕೆ ತಂದುಕೊಂಡರೆ ಬಿಂದುಸಹಿತವಾದ ಓಂಕಾರೋಪಾಸನೆಯ ತತ್ವವು ಗೊತ್ತಾಗುವುದು.

# ೭ನೆಯ ಪ್ರಕರಣ

## ಓಂಕಾರೋಪಾಸನೆಯಲ್ಲಿ 'ನಾದದ' ಸೋಪಾನ

೭ನೇ ಪ್ರಕರಣದಲ್ಲಿರುವ ವಿಷಯಗಳು: — [ಎದೆಯಲ್ಲಿ ಹೃದಯ ಕಮಲವೆನಿಸುವ ಅಧೋಮುಖವಾಗಿರುವ ಅನಾಹತಚಕ್ರವು ಊರ್ಧ್ವಮುಖ ವಾಗಬೇಕಾಗಿರುವ ವಿಚಾರ. ಓಂಕಾರೋಪಾಸನೆಯ ಅನುಷ್ಠಾನದಲ್ಲಿ ತನ್ನೊಳಗೆ ಇರುವ ಮಧ್ಯಾಹ್ನದ ಸೂರ್ಯತೇಜಸ್ಸು ಮತ್ತು ಓಂಕಾರನಾದದ ಸೋಪಾನವನ್ನು ಪಡೆಯುವಿಕೆ. ಹೃದಯಾಕಾಶ ಎಂಬುದರ ವಿವರಣೆ.

ಹೃದಯಕಮಲವೆನಿಸುವ ಅನಾಹತಚಕ್ರದಿಂದ ಸುಷುಮ್ನಾನಾಡಿಯು ಬೆನ್ನಿನ ಹುರಿಯಲ್ಲೇ ಕಂಠದ ಹಿಂಭಾಗದ ಮೇಲುಗಡೆಗೆ ಹೋಗಿ ನಮ್ಮ ತಾಲು ಮೂಲದ ಮೂಲಕ ಶಿರಸ್ಸಿನೊಳಕ್ಕೆ ಪ್ರವೇಶಿಸಿರುವುದೆಂಬ ವಿಚಾರ. ಶಿರಸ್ಸಿನಲ್ಲಿ ಭ್ರೂಮಧ್ಯಕ್ಕೆ ಸರಿಯಾಗಿ ಇರುವ ತಾಲುಮೂಲದ ಪ್ರದೇಶವೇ ಈಶ್ವರ ಸೋಪಾನ. ಓಂಕಾರೋಪಾಸನೆಯ ಅನುಷ್ಠಾನವನ್ನು ಮಾಡುತ್ತಿದ್ದ ಅಧಿಕಾರಿಯ ಬುದ್ಧಿವೃತ್ತಿಯು ಈಶ್ವರ ಸೋಪಾನವಾದ ಕಳಾಸೋಪಾನಕ್ಕೆ ತಲಪುವ ವಿಚಾರ.]

ಕಿರಣರಹಿತವಾದ ಪ್ರಾತಃಕಾಲದ ಸೂರ್ಯಬಿಂಬದಂತೆ ತೇಜೋಬಿಂದುವು ಓಂಕಾರವರ್ಣೋಚ್ಚಾರಣೆಯ ಧ್ಯಾನಾಭ್ಯಾಸದ ಪ್ರಥಮದಲ್ಲಿ ಗೋಚರವಾಗುವುದೆಂದು ಹಿಂದೆ ತಿಳಿಸಿರುತ್ತೆ. ಪ್ರಾತಃಕಾಲದಿಂದ ಮಧ್ಯಾಹ್ನ ಹನ್ನೆರಡು ಘಂಟೆಯವರೆಗೆ ಸೂರ್ಯನ ತೇಜಸ್ಸು ಅಧಿಕವಾಗುತ್ತಷ್ಟೆ. ಅಧಿಕಾರಿಯಧ್ಯಾನಾಭ್ಯಾಸವು ಅಭಿವೃದ್ಧಿಯಾಗುತ್ತಾಬಂದಂತೆ, ತನ್ನೊಳಗೇ ಇರುವ ಸೂರ್ಯನ ತೇಜಸ್ಸು ಅಧಿಕವಾಗಿ ಮಧ್ಯಾಹ್ನದ ಪೂರ್ಣತೇಜೋರೂಪದಲ್ಲಿ ಧ್ಯಾನಮಾಡುವ ಸ್ಥಿತಿಯನ್ನು ಈಗ ಅಧಿಕಾರಿಯು ಪಡೆದಿರುತ್ತಾನೆ. ನಮ್ಮಲ್ಲಿರುವ ಹೃದಯಕೋಶದ ಕಮಲವೆನಿಸುವ ಅನಾಹತಚಕ್ರದಲ್ಲಿ ಸೂರ್ಯನಿರುತ್ತಾನೆ. ಅಧಿಕಾರಿಯ ಬುದ್ಧಿಮನಸ್ಸಿನ ವೃತ್ತಿಗಳು ಪ್ರಾಣಶಕ್ತಿಯೊಡನೆ ಮೂಲಾಧಾರಚಕ್ರದಿಂದ ಸುಷುಮ್ನಾನಾಡಿಯೊಳಗೆ ಮೇಲ್ಮುಖವಾಗಿ ಹತ್ತಿ ಅನಾಹತಚಕ್ರವನ್ನು ಸೇರಿದರೆ ಧ್ಯಾನದಲ್ಲಿ ಪೂರ್ಣಸೂರ್ಯನ ತೇಜಸ್ಸಿನಲ್ಲಿ ಇರುತ್ತೆಂಬ ತತ್ವವಾಗಿರುವುದು. ಮಧ್ಯಾಹ್ನದ ಸೂರ್ಯನ ಕಿರಣಗಳೆಲ್ಲಾ ಅಧೋಮುಖವಾಗಿ ಪ್ರಕಾಶಿಸುವಂತೆ ಹೃದಯಕೋಶದ ಕಮಲವಾದ ಅನಾಹತಚಕ್ರವು ಅಧೋಮುಖವಾಗಿರುವುದು.

ಅನಾಹತಚಕ್ರದ ಕಮಲವು ಅಧೋಮುಖವಾಗಿರಲು ಕಾರಣವೇನೆಂದರೆ— 'ಓಂ' ಕಾರದಲ್ಲಿರುವ 'ಅ' ಕಾರವು ಮೂಲಾಧಾರಚಕ್ರದಲ್ಲಿದೆ, 'ಉ' ಕಾರವು ಅನಾಹತಚಕ್ರದಲ್ಲಿದೆ. 'ಮ' ಕಾರವು ಭ್ರೂಮಧ್ಯವೆಂದರೆ ಆಜ್ಞಾಚಕ್ರದಲ್ಲಿದೆ. 'ಅ' ಕಾರವು 'ಉ' ಕಾರದಲ್ಲಿ ಸೇರಿದರೆ 'ಓ' ಕಾರವಾಗುವುದು. 'ಓ' ಕಾರವು 'ಮ' ಕಾರದಲ್ಲಿ ಸೇರಿ ಅನುಸ್ವಾರದೊಡಗೂಡಿದರೆ 'ಓಂ' ಕಾರವಾಗುವುದು. ನಾವು 'ಅಂ' ಅಥವಾ 'ಓಂ' ಕಾರವನ್ನು ಉಚ್ಚರಿಸಿದಲ್ಲಿ ತುಟಿಗಳನ್ನು ಮುಚ್ಚಲೇ ಬೇಕಾಗುವುದು. ತುಟಿಗಳನ್ನು ಸ್ಥಾಯಿಯಾಗಿ ಮುಚ್ಚಿಬಿಟ್ಟರೆ ನಾವು ಮಾತನಾಡಲು ಮತ್ತು ಪದಾರ್ಥಗಳನ್ನು ತಿನ್ನಲು ಯತ್ನವಿಲ್ಲ. ದೇಹ ವ್ಯಾಪಾರವು ನಡೆಯಲು ಮಾತಾಡಲು ಬಾಯಿ ತೆರೆದೇ ಇರಬೇಕು. 'ಓಂ' ಕಾರವನ್ನು ಉಚ್ಚರಿಸಿದರೆ ತುಟಿಗಳನ್ನು ಮುಚ್ಚಲೇಬೇಕಾಗುತ್ತೆ. 'ಅಃ' ಅಕ್ಷರವನ್ನು ಉಚ್ಚರಿಸಿದರೆ

ಬಾಯಿ ಬಿಟ್ಟುಕೊಳ್ಳುವುದು. ಆದುದರಿಂದ '**ಅ**'ಕಾರವು '**ಉ**' ಕಾರದಲ್ಲಿ ಸೇರಿ ಆಗುವ '**ಓ**' ಕಾರವನ್ನು '**ಮ**' ಕಾರಕ್ಕೆ ಸಂಬಂಧಿಸದಂತೆ ಅನಾಹತಚಕ್ರದಲ್ಲಿ ಪರಾ ಶಕ್ತಿಯಾದ ವಿಸರ್ಗ (**ಅಃ**) ಶಕ್ತಿಯು ಬಂಧಿಸಿರುವುರಿಂದ ಹೃದಯ ಕಮಲವು ಅಧೋ ಮುಖವಾಗಿದೆ, ಮತ್ತು ಸೂರ್ಯನ ಕಿರಣಗಳು ಅಧೋಮುಖವಾಗಿಯೇ ಪ್ರಕಾಶಿಸು ತ್ತಿವೆ. ಓ ಕಾರವು **ಮ** ಕಾರಕ್ಕೆ ಸಂಬಂಧವಾಗಬೇಕಾದರೆ ಅಧೋಮುಖವಾಗಿರುವ ಹೃದಯ ಕಮಲವು ಊರ್ಧ್ವಮುಖವಾಗಬೇಕು. ಅಂದರೆ ಸೂರ್ಯನು ಕಿರಣರಹಿತ ನಾಗಿ ಪುನಃ ಅಗ್ನಿರೂಪವನ್ನು ಹೊಂದಬೇಕು.

ಆರನೇ ಅನುವಾಕದ ಈ ಉಪನಿಷತ್ತಿನ '**ಸ ಯ ಏಷೋಽನ್ತರ ಹೃದಯ ಆಕಾಶಃ**' ಎಂಬ ಮಂತ್ರದ ಭಾಷ್ಯದಲ್ಲಿ ಶ್ರೀಶಂಕರಭಗವತ್ಪಾದಾಚಾರ್ಯರವರು "ಹೃದಯವೆಂದರೆ ಕಮಲದ ಆಕಾರವುಳ್ಳದ್ದಾಗಿ ಪ್ರಾಣಕ್ಕೆ ಆಶ್ರಯವಾಗಿ, ಅನೇಕ ನಾಡಿಗಳಿಂದಲೂ ರಂಧ್ರಗಳಿಂದಲೂ ಕೂಡಿದ್ದಾಗಿ, ಮೇಲ್ಗಡೆಗೆ ನಾಳ, ಕೆಳಗಡೆಗೆ ಮುಖ ಇರುವುದಾಗಿ, ಯಜ್ಞದ ಪಶುವನ್ನು ಕೊಯ್ಯುವಾಗ ಪ್ರಸಿದ್ಧವಾಗಿ ಕಾಣುವ ಮಾಂಸಪಿಂಡವೆಂದು ಹೇಳಿರುತ್ತಾರೆ." ಅಂದರೆ ಹೃದಯಕಮಲವಾದ ಅನಾಹತಚಕ್ರವು ಪ್ರಾಣಮಯಕೋಶಕ್ಕೆ ಪ್ರಧಾನಸ್ಥಳವಾಗಿರುವುದರಿಂದಲೇ, ಪ್ರಾಣಕ್ಕೆ ಆಶ್ರಯವಾಗಿದೆ ಯೆಂದು ಭಾಷ್ಯದಲ್ಲಿದೆ. ಹೃದಯಕಮಲವಾದ ಅನಾಹತಚಕ್ರವು ಅಧೋಮುಖ ವಾಗಿ ಮೇಲ್ಗಡೆಗೆ ನಾಳವುಳ್ಳದ್ದಾಗಿದೆಯೆಂಬುದು ಭಾಷ್ಯದಿಂದ ಸ್ಪಷ್ಟಪಡುತ್ತೆ. ಈ ತೈತ್ತಿರೀಯ ಶ್ರುತಿಯಲ್ಲೇ ಬೇರೊಂದು ಕಡೆ '**ಹೃದಯಂ ಚಾಪ್ಯ ಧೋಮುಖಂ । ತಸ್ಯಾಶ್ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ।**' ಎಂದು ಹೇಳಿರುವುದ ರಿಂದ ಹೃದಯಕಮಲವು ಅಧೋಮುಖವಾಗಿದೆ. ಅಧೋಮುಖವಾಗಿರುವ ಹೃದಯಕಮಲವು (ಅನಾಹತಚಕ್ರವು) '**ಓಂ**' ಕಾರೋಪಾಸನೆಯಿಂದ ಊರ್ಧ್ವ ಮುಖವಾಗುವುದೆಂಬುದನ್ನು ಕೆಳಗಿನ ಯೋಗಚೂಡಾಮಣ್ಯುಪನಿಷತ್ತಿನ ವಾಕ್ಯವು ಸಮರ್ಥಿಸುವುದು.

**ಜ್ಞಾನಿನಾ ಮೂರ್ಧ್ವಭಾಗೋ ಭೂದಜ್ಞಾನೇಸ್ಯಾದ ಧೋಮುಖಃ ।**
**ಏವಂ ವೈಪ್ರಣವಸ್ತಿಷ್ಠೇ ದ್ಯಸ್ತಂ ವೇದ ಸವೇದವಿತ್ ।**
**ಅನಾಹತ ಸ್ವರೂಪೇಣ ಜ್ಞಾನಿನಾ ಮೂರ್ಧ್ವಗೋ ಭವೇತ್ ।**

**ತಾತ್ಪರ್ಯ**—ಹೃದಯಕಮಲವಾದ ಅನಾಹತ ಚಕ್ರದ ಸ್ಥಳದಲ್ಲಿರುವ ಓಂ ಕಾರದಲ್ಲಿರುವ '**ಉ**' ಕಾರವು '**ಮ**' ಕಾರಕ್ಕೆ ಸಂಬಂಧಿಸದಂತೆ ಬಂಧಿಸಲ್ಪಟ್ಟಿರುವುದ ರಿಂದ ಹೃದಯಕಮಲವಾದ ಅನಾಹತಚಕ್ರವು ಕೂಡ ಅಧೋಮುಖವಾಗಿದೆ. ಆದುದರಿಂದ '**ಓಂ**' ಕಾರವು ಜ್ಞಾನಿಗಳಿಗೆ ಊರ್ಧ್ವಮುಖವಾಗಿಯೂ ಅಜ್ಞಾನಿ ಗಳಿಗೆ ಅಧೋಮುಖವಾಗಿಯೂ ಇರುವುದು. ಧ್ಯಾನಯೋಗಾನುಷ್ಠಾನದಿಂದ ಅಧೋ

ಮುಖನಾಗಿರುವ ಹೃದಯಕಮಲವಾದ ಅನಾಹತಚಕ್ರವು ಊರ್ಧ್ವಮುಖವಾಗುವು ದರಿಂದ **'ಓ'** ಕಾರವು ಕೂಡ ಊರ್ಧ್ವಮುಖವಾಗಿ **'ಮ'** ಕಾರವನ್ನು ಸೇರುವುದ ರಿಂದ ಓಂಕಾರವಾಗಿ ಪರಬ್ರಹ್ಮಸಾಕ್ಷಾತ್ಕಾರವಾಗುವುದು. ಈ ರೀತಿಯಾದ ಪ್ರಣವ ಸ್ವರೂಪವನ್ನು ತಿಳಿದವನೇ ಜ್ಞಾನಿಯು.

ಅಲ್ಲದೆ ಉತ್ತರಗೀತೆಯಲ್ಲಿನ ಅರ್ಜುನನ ಪ್ರಶ್ನೆ ಮತ್ತು ಶ್ರೀ ಕೃಷ್ಣಪರಮಾ ತ್ಮನ ಉತ್ತರವು ಮೇಲಿನ ತತ್ವಗಳನ್ನು ಸಮರ್ಥಿಸುವುದು.

ಅರ್ಜುನನ ಪ್ರಶ್ನೆ—

**ದುರ್ವಿಜ್ಞೇಯಂ ದುರಾರಾಧ್ಯಂ ದುಷ್ಪ್ರಗಮ್ಯಂ ಜನಾರ್ದನ ।**
**ಅಧೋಮುಖಂ ಯಥಾಭೂತ್ವಾ ಹೃದಯೇಕೇನ ಗಚ್ಛತಿ ।**

**ತಾತ್ಪರ್ಯ**—ಎಲೈ ಶ್ರೀ ಕೃಷ್ಣನೆ! ತಿಳಿದುಕೊಳ್ಳಲು ಆರಾಧಿಸಲು ಮತ್ತು ಹೊಂದಲು ಸುಲಭ ಸಾಧ್ಯವಲ್ಲದ್ದಾಗಿ ಅಧೋಮುಖವಾಗಿರುವ ಹೃದಯ ಪದ್ಮದ ತುದಿ ಯನ್ನು ಏತರಿಂದ ಹೊಂದುತ್ತಾನೆ.

ಶ್ರೀ ಕೃಷ್ಣಪರಮಾತ್ಮನ ಉತ್ತರ—

**ಅಧೋಮುಖಂತು ಹೃತ್ಪದ್ಮಮುದ್ಧೃತ್ಯ ಪ್ರಣವೇನತು ।**
**ಗತ್ವಾತು ಪದ್ಮಕೋಶಾಂತ ಮೇಕಸ್ಸೇವ್ಯೋ ಪುನಃ ಪುನಃ ।**
**ತತಃ ಪಶ್ಚಾದ್ಭವೇತ್ಪದ್ಮಂ ಸರ್ವಗಾತ್ರ ಸುಖಾವಹಮ್ ।**

**ತಾತ್ಪರ್ಯ**—ಅಧೋಮುಖವಾಗಿರುವ ಹೃದಯಕಮಲವನ್ನು ಓಂಕಾರೋ ಪಾಸನೆಯಿಂದ ಮೇಲಕ್ಕೆ ಎಬ್ಬಿಸಿ ಇದರ ಶಿಖೆಯೆಂದರೆ ಶಿರಸ್ಸಲ್ಲಿರುವ ಪರಮಾಕಾಶವೆನಿ ಸುವ ಸಹಸ್ರಾರ ಕಮಲವನ್ನು ಹೊಂದಿ, ಸರ್ವವ್ಯಾಪಿಯೂ ಆನಂದರೂಪಿಯೂ ಆದ ಪರಮಾತ್ಮನನ್ನು ಸೇವಿಸಬೇಕು.

ಉಪನಿಷತ್ತಿನ ಆರನೇ ಅನುವಾಕದ ಮಂತ್ರದಲ್ಲಿನ **'ಭೂರಿತ್ಯಗ್ನೌ ಪ್ರತಿತಿ ಷ್ಠತಿ । ಭುವ ಇತಿ ವಾಯೌ ।'** ಎಂಬುದರ ತತ್ವವನ್ನು ಇದುವರೆವಿಗೂ ವಿವರಿಸಿತು. ಈಗ ಮುಂದಿನ ಮಂತ್ರವಾದ **'ಸುವರಿತ್ಯಾದಿತೇ'** ಎಂಬುದರ ತತ್ವಕ್ಕೆ ಓಂಕಾರೋಪಾ ಸನೆಯನ್ನು ಮಾಡುತ್ತಿದ್ದ ಅಧಿಕಾರಿಯು ಬಂದಿರುತ್ತಾನೆ. ಅಂದರೆ ತನ್ನೊಳಗೇ ಇರುವ ಪೂರ್ಣಕಿರಣ ಸಹಿತವಾದ ಮಧ್ಯಾಹ್ನದ ಸೂರ್ಯತೇಜಸ್ಸಿನಲ್ಲಿ ಧ್ಯಾನಮಾಡುವ ಅರ್ಹತೆಯನ್ನು ಹೊಂದಿರುವನು. ಮಧ್ಯಾಹ್ನದ ಪೂರ್ಣ ತೇಜೋರೂಪನಾದ

ಸೂರ್ಯನ ಕಿರಣಗಳು ತಗ್ಗುತ್ತಾ ಸಾಯಂಕಾಲಕ್ಕೆ ಪುನಃ ಅಗ್ನಿರೂಪವನ್ನು ಹೊಂದು ವುವು. ಈ ಅಗ್ನಿರೂಪವನ್ನೂ ಕೂಡ ಚಂದ್ರನು ನುಂಗುವನು. ಚಂದ್ರನು ಅಗ್ನಿ ಯನ್ನು ತನ್ನಲ್ಲಿ ಅಡಗಿಸಿಕೊಳ್ಳುವ ಅನುಷ್ಠಾನದವರೆಗೂ **'ಸುವರಿತ್ಯಾದಿತ್ಯೇ'** ಎಂಬ ಮಂತ್ರದ ತತ್ವವು ಇರುವುದು.

ಹೃದಯ ಕಮಲಕ್ಕೆ ಅನಾಹತವೆಂಬ ಹೆಸರು ಬರಲು ಕಾರಣವೇನೆಂದರೆ **'ಅ ನಹ್ಯತೆ ಅನೇನೇತಿ ಅನಾಹತಃ** (ಣಹ ಬಂಧನೆ) ಅಂದರೆ ಇದರಿಂದ ಬಂಧಿಸಲ್ಪಟ್ಟಿರು ವುದು. 'ಓಂ' ಕಾರದಲ್ಲಿನ 'ಅ' ಕಾರ 'ಉ' ಕಾರ ಸೇರಿ ಆಗುವ 'ಓ' ಕಾರ ಸ್ವರೂಪ ವಾದ ಶಬ್ದಬ್ರಹ್ಮವನ್ನು ಈ ಸ್ಥಳದಲ್ಲಿ ಸ್ತಂಭಿಸಿರುವುದರಿಂದ ಅನಾಹತಚಕ್ರವೆಂದು ಹೆಸರು ಬಂದಿದೆ. ಹೀಗೆ ಸ್ತಂಭಿಸಿರುವ 'ಓ' ಕಾರಶಕ್ತಿಯೇ ಪ್ರಾಣಶಕ್ತಿಯೆನಿಸುವುದ ರಿಂದ ಅನಾಹತಚಕ್ರವು ಪ್ರಾಣಮಯ ಕೋಶಕ್ಕೆ ಪ್ರಧಾನಸ್ಥಳವಾಗಿದೆ. ಅನಾಹತ ಎನ್ನುವುದಕ್ಕೆ ಇನ್ನೊಂದು ಅರ್ಥವೇನೆಂದರೆ–**'ಆಹತಾಃ ಕ್ನಾಳನ ಭೋಗಚ್ಛೇದಾಃ ತದ್ರಹಿತತ್ವಾತ್ ಅನಾಹತಃ'** ಬಗೆಯುವಿಕೆ ಬಡಿಯುವಿಕೆ ಭೇದಿಸುವಿಕೆ ಈ ಮೂರಕ್ಕೂ ಆಹತವೆಂದು ಹೆಸರು. ಅದಿಲ್ಲದಿರುವುದು ಅನಾಹತ. ನಾವು ಮಾತ ನಾಡುವ ಮತ್ತು ಪ್ರಪಂಚದಲ್ಲಿ ಕೇಳಬರುವ ಯಾವಶಬ್ದವೇ ಆಗಲಿ ಒಂದು ಪದಾ ರ್ಥಕ್ಕೆ ಇನ್ನೊಂದು ಪದಾರ್ಥ ಬಡಿಯುವುದರಿಂದ ಉಂಟಾಗುವ ಶಬ್ದವೇ ಹೊರತು ಸ್ವಾಭಾವಿಕವಾಗಿ ತನ್ನಷ್ಟಕ್ಕೆ ತಾನೇ ಇರತಕ್ಕದ್ದಲ್ಲ.

ಓಂಕಾರ ಶಬ್ದವಾದರೊ ಯಾವ ಸಂಯೋಗದಿಂದಲೂ ಉಂಟಾಗದೆ ತನ್ನಷ್ಟಕ್ಕೇ ತಾನು ವಿಶ್ವವ್ಯಾಪಿಯಾಗಿರುವುದು. ಪ್ರಪಂಚದಲ್ಲಿ ನಾವು ಕೇಳುವ ಎಲ್ಲಾ ಆಹತ ಶಬ್ದಗಳೂ ಆಕಾಶಾಂತರ್ಗತವಾಗಿರುವ ವಿಶ್ವವ್ಯಾಪಿಯಾದ ಅನಾಹತವೆನಿಸುವ **'ಓಂ'** ಕಾರ ಶಬ್ದದಿಂದ ಪದಾರ್ಥಗಳ ತಾಡನಗಳ ತಾರತಮ್ಯಾನುಸಾರ ಹುಟ್ಟುವುವು. ಹೀಗೆ ಹುಟ್ಟಿದ ಆಹತ ಶಬ್ದವು ಪುನಃ ಅನಾಹತಶಬ್ದವೆನಿಸುವ ವಿಶ್ವವ್ಯಾಪಿಯಾದ 'ಓಂ' ಕಾರ ಶಬ್ದದಲ್ಲೇ ಅಡಗುವುದು. ಆದುದರಿಂದ ಪ್ರಪಂಚದಲ್ಲಾಗುವ ಸರ್ವ ಶಬ್ದವೂ 'ಓಂ' ಕಾರದ ಪ್ರತಿಧ್ವನಿಯಾಗಿದೆ. ಇಲ್ಲಿ ಕೊಟ್ಟಿರುವ ಮನುಷ್ಯ ಚಿತ್ರದಲ್ಲಿ ಆಯಾಯಾ ಚಕ್ರಗಳಲ್ಲಿ ಯಾವ ಯಾವ ಅಕ್ಷರ ಶಕ್ತಿಗಳಿರುತ್ತವೆಯೊ ಅವುಗಳನ್ನು ಗುರ್ತಿಸಿದೆ. ಎಲ್ಲಾ ಅಕ್ಷರ ಶಕ್ತಿಗಳೂ ಅನಾಹತ ನಾದವೆನಿಸುವ ಓಂಕಾರಕ್ಕೆ ಸೇರಿ ಸುಷುಮ್ನಾನಾಡಿಯೊಳಗೆ ಇರುವುವು. ನಾವು ಮಾತನಾಡುವ ಮತ್ತು ಗಾನಮಾಡುವ ಪ್ರತಿಯೊಂದು ಅಕ್ಷರ ಮತ್ತು ಗಾನರೂಪವಾದ ಸ್ವರಶಕ್ತಿಗಳು ಸುಷುಮ್ನಾನಾಡಿಯಲ್ಲಿ ರುವವುಗಳ ಪ್ರತಿಧ್ವನಿಯಾಗಿರುವುವು. ಆದುದರಿಂದ ನಮ್ಮ ವಾಕ್ಕು ಮತ್ತು ಗಾನ ಆಹತನಾದಕ್ಕೆ ಸೇರಿರುತ್ತೆ. ಅಲ್ಲದೆ 'ಅ' ಮೊದಲುಗೊಂಡು 'ಅಃ' ವರೆಗಿರುವ ಹದಿನಾರು ಸ್ವರಾಕ್ಷರಗಳು ವಿಶುದ್ಧಚಕ್ರದಲ್ಲಿರುತ್ತವೆ. ಈ ಹದಿನಾರು ಸ್ವರಾಕ್ಷರಗಳು **"ಸ್ವಕೋರಂ**

**ಜಯುತೀತಿ ಸ್ವರಃ"** ಎಂಬ ಅರ್ಥದಂತೆ ಸ್ವಪ್ರಕಾಶವಾದವುಗಳಾಗಿ ಆಕಾಶ ತತ್ವದಲ್ಲಿ ರುವ ಕಳಾ ಸ್ವರೂಪದಲ್ಲಿ ನೆಲೆಸಿ, "ಷೋಡಶ ಕಳಾವೈ ಪುರುಷಃ" ಎಂಬ ಶ್ರುತಿವಚ ನಾನುಸಾರ ಈಶ್ವರ ಈಶ್ವರಿಯರಲ್ಲಿರುವ ಷೋಡಶಕಳೆಗಳೆನಿಸಿಕೊಳ್ಳುತ್ತವೆ.

ಅನಾಹತಚಕ್ರದಿಂದ ಮೂಲಾಧಾರಚಕ್ರದವರೆಗೂ ವ್ಯಂಜನಾಕ್ಷರಗಳಿವೆ. ಅಲ್ಪಪ್ರಾಣ ಮಹಾಪ್ರಾಣಾಕ್ಷರಗಳಾದ ಈ ಅಕ್ಷರ ಶಕ್ತಿಗಳು ಮಲಿನ ಸತ್ವಗುಣ, ರಜೋಗುಣ, ತಮೋಗುಣಗಳಿಗೆ ಸೇರಿದವುಗಳಾಗಿ ಇರುವುದರಿಂದ ಸ್ವಪ್ರಕಾಶವಾದವು ಗಳಲ್ಲ. ಸ್ವರಾಕ್ಷರಗಳ ಪ್ರಕಾಶದಿಂದಲೇ ವ್ಯಂಜನಾಕ್ಷರಗಳು ಪ್ರಕಾಶವನ್ನು ಹೊಂದ ಬೇಕು. ಅಂದರೆ ಈಶ್ವರ ಈಶ್ವರಿಯರು ಅಂತರ್ಯಾಮಿರೂಪದಲ್ಲಿ ಮಲಿನ ಸತ್ವಗುಣ, ರಜೋಗುಣ ತಮೋಗುಣಗಳ ಕಾರ್ಯಗಳನ್ನು ಪ್ರಕಾಶಪಡಿಸುತ್ತಿರುವರೆಂಬ ತತ್ವವಾಗಿ ರುವುದು. ಅಂದರೆ ಸ್ವರಾಕ್ಷರಗಳು ವ್ಯಂಜನಾಕ್ಷರಗಳೊಡನೆ ಕಲೆತು ಧೀರ್ಘ, ಏತ್ವ, ಕೋಬು, ಓತ್ವ ಮುಂತಾದುವುಗಳನ್ನುಂಟುಮಾಡಿ ಪ್ರಕಾಶಪಡಿಸುವುವು. ಇದರಿಂದ ಅನೇಕ ಕಲಾವಿಭಾಗಗಳಾಗುವುವು. ಅಲ್ಲದೆ ಸ್ವರಾಕ್ಷರಗಳು ಉದಾತ್ತ, ಅನುದಾತ್ತ, ಸ್ವರಿತ, ಪ್ರಚಯುಗಳೆಂಬ ನಾಲಕ್ಕು ಭೇದಗಳಿಂದ ಅರವತ್ತುನಾಲಕ್ಕು ಕಳೆಗಳಾಗು ವವು. ವ್ಯಂಜನಾಕ್ಷರಗಳ ಸಂಯೋಗದಿಂದ ಅನಂತವಾದ ಕಳೆಗಳಾಗುವವು. ಈ ಕಳೆಗಳಿಂದ ಜಗತ್ತಿನ ಸೃಷ್ಟಿ, ಸ್ಥಿತಿ ಲಯಗಳಾಗುವುವು. ಆದುದರಿಂದ ಓಂಕಾರ ನಾದ ಬ್ರಹ್ಮದ ಮಹಿಮೆಯನ್ನು ವರ್ಣಿಸಲು ಅಸ್ಮದಾದಿಗಳಿಗೆ ಸಾಧ್ಯವಿಲ್ಲ

'ಅ'ಕಾರ 'ಉ' ಕಾರ ಸೇರಿ ಆಗುವ 'ಓ' ಕಾರವು ಅನಾಹತಚಕ್ರದಲ್ಲಿ ಬಂಧಿ ಸಲ್ಪಟ್ಟಿರುವುದು. ಅಂದರೆ ಹೃದಯಕಮಲವು ಅಧೋಮುಖವಾಗಿರುವುದೆಂದು ಹಿಂದೆ ತಿಳಿಸಿತಷ್ಟೆ. ಓ ಕಾರವನ್ನು ಎಷ್ಟು ಲಂಬಿಸಿಕೊಂಡು ಉಚ್ಚರಿಸಿದರೂ ಬಾಯಿ ಬಿಟ್ಟುಕೊಂಡೇ ಉಚ್ಚರಿಸಬೇಕಾಗುವುದು. ಇದರಿಂದ ನಾದವು ಉಂಟಾಗುವುದಿಲ್ಲ. ಆದುದರಿಂದ ಓ ಕಾರವು ಅನುಸ್ವಾರದೊಡಗೂಡಿದ ಮ ಕಾರವನ್ನು ಸೇರಿದರೆ ಓಂ ಕಾರ ನಾದೋತ್ಪತ್ತಿಯಾಗುವುದು. 'ಓ' ಕಾರಕ್ಕೆ ಅನುಸ್ವಾರದೊಡಗೂಡಿದ ಮ ಕಾರ ಸೇರಿಸಿ ಉಚ್ಚರಿಸಿದರೆ ತುಟಿಗಳನ್ನು ಮುಚ್ಚಿಕೊಳ್ಳಲೇ ಬೇಕಾಗುವುದು. ಈಗ ಅಧಿಕಾರಿಯು ತನ್ನೊಳಗೇ ಇರುವ ಪೂರ್ಣತೇಜೋರೂಪಿನ ಮಧ್ಯಾಹ್ನದ ಸೂರ್ಯ ನನ್ನು ಧ್ಯಾನಮಾಡಲು ಅರ್ಹನಾಗಿರುತ್ತಾನಷ್ಟೆ. ಈ ಸೂರ್ಯ ತೇಜಸ್ಸಿನೊಳಗೆ 'ಓಂ' ಕಾರನಾದವೂ ಉತ್ಪತ್ತಿಯಾಗುವುದು. ಅಂದರೆ ಅಧಿಕಾರಿಯು ಸೂರ್ಯ ತೇಜಸ್ಸನ್ನೂ 'ಓಂ'ಕಾರ ನಾದವನ್ನೂ ಏಕಕಾಲದಲ್ಲಿ ಧರಿಸಿಕೊಂಡು ಧ್ಯಾನಮಾಡ ಬೇಕಾಗುವುದು. ಈ ತತ್ವವನ್ನು ಮುಕ್ತಿಕೋಪನಿಷತ್ತಿನ "**ತೇಜೋನಾದ ಧ್ಯಾನ ವಿದ್ಯಾಯೋಗ ತತ್ವಾತ್ಮ ಬೋಧಕಂ**" ಎಂಬ ವಾಕ್ಯವು ಸಮರ್ಥಿಸುವುದು.

ಅಲ್ಲದೆ ಉತ್ತರಗೀತೆಯಲ್ಲಿನ ಅರ್ಜುನನ ಪ್ರಶ್ನೆಗೆ ಶ್ರೀ ಕೃಷ್ಣಪರಮಾತ್ಮನು ಹೇಳಿರುವ ಕೆಳಗಿನ ವಾಕ್ಯವೂ ಮೇಲಿನ ತತ್ವವನ್ನು ಸಮರ್ಥಿಸುವುದು.

ಅರ್ಜುನನ ಪ್ರಶ್ನೆ :

**ಅಕ್ಷರಾಣಿ ಸಮಾತ್ರಾಣಿ ಸರ್ವೇ ಬಿಂದು ಸಮಾಶ್ರಿತಾಃ ।**
**ಬಿಂದುರ್ಭಿದ್ಯತಿ ನಾದೇನ ಸ ನಾದಃ ಕೇನ ಭಿದ್ಯತೇ ।**

**ತಾತ್ಪರ್ಯ** ॥—ಎಲೈ ಶ್ರೀ ಕೃಷ್ಣನೇ ! ಅಕಾರಾದಿ ಕ್ಷಕಾರಾಂತವಾದ ವರ್ಣ ಗಳು ಹ್ರಸ್ವಧೀರ್ಘಗಳೊಡನೆ ಕೂಡಿಕೊಂಡು ಬಿಂದುವಿನೊಡನೆ ಕೂಡಿರುತ್ತವೆ. ಬಿಂದುವು ಅಡಗಿದರೆ ನಾದವಾಗುವುದು. ನಾದವು ಅಡಗಿದರೆ ಯಾವ ಸ್ವರೂಪ ಉಂಟಾಗುವುದು ?

ಶ್ರೀ ಕೃಷ್ಣಪರಮಾತ್ಮನ ಉತ್ತರ :

**ಅನಾಹತಸ್ಯ ಶಬ್ದಸ್ಯತಸ್ಯ ಶಬ್ದಸ್ಯ ಯೋಧ್ವನಿಃ ।**
**ಧ್ವನೇರಂತರ್ಗತಂ ಜ್ಯೋತಿಃ ಜ್ಯೋತಿರಂತರ್ಗತಂ ಮನಃ ॥**
**ಯನ್ಮನ ಸ್ತ್ರಿ ಜಗತ್ಸೃಷ್ಟಿ ಸ್ಥಿತಿ ವ್ಯಸನ ಕರ್ಮಕೃತ್ ।**
**ತನ್ಮನೋ ವಿಲಯಂಯಾತಿ ತದ್ವಿಷ್ಣೋಃ ಪರಮಂ ಪದಂ ॥**

**ತಾತ್ಪರ್ಯ** :—ಅನಾಹತಚಕ್ರದಲ್ಲಿ ಉತ್ಪನ್ನವಾಗುವ ನಾದದೊಳಗೆ ಸೂರ್ಯ ಜ್ಯೋತಿಯೂ, ಈ ಜ್ಯೋತಿಯೊಳಗೆ ಬುದ್ಧಿ ಮನಸ್ಸಿನ ವೃತ್ತಿಗಳೂ ಇರುವುವು. ಈ ಬುದ್ಧಿ ಮನಸ್ಸುಗಳೇ ದುಃಖ ರೂಪವಾದ ಜನನ ಮರಣಗಳ ಪ್ರವಾಹಗಳ ಕಾರ್ಯ ಗಳಲ್ಲಿದ್ದವು. ಇಂತಹಬುದ್ಧಿಮನಸ್ಸುಗಳು ನಾದ ಮತ್ತು ಜ್ಯೋತಿಯು ಅಂತರ್ಗತ ವಾದರೆ ಅದೇ ಪರಮಪದವಾದ ಸರ್ವವ್ಯಾಪಕವಾದ ವಿಷ್ಣುಪದವಾಗಿರುವುದು.

'ಓಂ' ಕಾರ ನಾದೋಪಾಸನೆಯ ಮಹತ್ತಿಗೆ ಶ್ರೀ ಶಂಕರಭಗವತ್ಪಾದಾಚಾರ್ಯ ರವರು ಯೋಗ ತಾರಾವಳಿಯಲ್ಲಿ,

**ಸದಾ ಶಿವೋಕ್ತಾನಿ ಸಪಾದಲಕ್ಷ । ಲಯಾವಧಾನಾನಿ ವಸಂತಿ ಲೋಕೇ ॥**
**ನಾದಾನು ಸಂಧಾನ ಸಮಾಧಿ ಮೇಕಂ । ಮನ್ಯಾಮಹೆ ಮಾನ್ಯತಮಂ ಲಯಾನಾಂ ॥**
**ನಾದಾನು ಸಂಧಾನ ನಮೋಸ್ತು ತುಭ್ಯಂ। ತ್ವಾಂಸಾಧನಂ ತತ್ವಪದಸ್ಯಜಾನೇ॥**
**ಭವತ್ಪ್ರಸಾದಾ ತ್ಪವನೇನ ಸಾಕಂ । ವಿಲೀಯತೇ ವಿಷ್ಣು ಪದೇ ಮನೋಮೇ ॥**

**ತಾತ್ಪರ್ಯ** :—ಬುದ್ಧಿಯು ಪರಮಾತ್ಮನಲ್ಲಿ ಲಯವಾಗುವುದಕ್ಕೆ ಲಕ್ಷಾಂತರ ಮಾರ್ಗಗಳು ಪರಮೇಶ್ವರನಿಂದ ಹೇಳಲ್ಪಟ್ಟಿರುವುವು. ಅವುಗಳಲ್ಲಿ ನಾದಾನುಸಂಧಾನ ದಿಂದ ಜನ್ಯವಾದ ಸಮಾಧಿಯೊಂದನ್ನೇ ಅತ್ಯುತ್ತಮವಾಗಿ ಎಣಿಸುತ್ತೇನೆ. ಹೇ ನಾದಾನು ಸಂಧಾನವೇ ! ನಿನಗೆ ನಮಸ್ಕಾರವು. ನಿನ್ನನ್ನು ಪರಮಾತ್ಮಸಾಕ್ಷಾ ತ್ಕಾರಕ್ಕೆ ಸಾಧನವನ್ನಾಗಿ ತಿಳಿಯುತ್ತೇನೆ. ನಿನ್ನ ಅನುಗ್ರಹದಿಂದ ಪ್ರಾಣವಾಯು ಸಹಿತವಾಗಿ ಬುದ್ಧಿವೃತ್ತಿಯು ಪರಮಾತ್ಮನಲ್ಲಿ ಲೀನವಾಗುವುದು.

ಬಿಂದುಸಹಿತವಾದ **'ಓಂ'ಕಾರೋಪಾಸನೆಯಲ್ಲಿ** ಭ್ರೂಮಧ್ಯದಲ್ಲಿ ದೃಷ್ಟಿಯ ನ್ನಿಟ್ಟು ತೇಜೋಬಿಂದುವನ್ನು ಧರಿಸಿಕೊಂಡು ಧ್ಯಾನಮಾಡುತ್ತಿದ್ದಂತೆ **'ಓಂ'ಕಾರ** ನಾದೋಪಾಸನೆಯನ್ನು ಮಾಡಲು ಸಾಧ್ಯವಿಲ್ಲ. ಅಂದರೆ ನಮ್ಮ ಅಂತರಂಗದಲ್ಲೇ ಗೋಚರಿಸುವ **ಓಂಕಾರ** ನಾದವನ್ನು ಕೇಳಲು ಸಾಧ್ಯವಾಗುವುದಿಲ್ಲ. ಆದುದರಿಂದ ಷಣ್ಮುಖೀಮುದ್ರೆಯಿಂದ ಕಿವಿ, ಕಣ್ಣು, ಮೂಗಿನ ಹೊಳ್ಳೆಗಳನ್ನು ಮುಚ್ಚಿಕೊಂಡು ಅಥವಾ ತರ್ಜನೀ ಬೆರಳುಗಳಿಂದ ಎರಡು ಕಿವಿಗಳನ್ನು ಮಾತ್ರ ಮುಚ್ಚಿಕೊಂಡು ಭ್ರೂಮಧ್ಯದೊಳಗೆ ದೃಷ್ಟಿಯನ್ನಿಟ್ಟುಕೊಂಡು, ಅಂತರಂಗದಲ್ಲೇ ಕೇಳುವ **ಓಂಕಾರ** ನಾದವನ್ನು ಆಲೈಸಿ ಕೇಳುತ್ತಾ, ಓಂಕಾರನಾದ ಮತ್ತು ಜ್ಯೋತಿಯ ತನ್ಮಯನಾಗಿ, ಜ್ಯೋತಿಯ ಮತ್ತು ನಾದದ ಅಂತರ್ಗತವಾಗಿರುವ ಪರಮಾತ್ಮನನ್ನು ಹೊಂದಬೇಕೆಂಬ ಅತ್ಯುತ್ಕಟವಾದ ಭಾವನೆಯಿಂದ ಧ್ಯಾನಮಾಡುತ್ತಾ ಬರಬೇಕು,

ಮಧ್ಯಾಹ್ನದ ಪೂರ್ಣತೇಜೋರೂಪಿನ ಸೂರ್ಯನಿದ್ದ ಕಾಲದಲ್ಲಿ ಕತ್ತಲೆಯ ಹೆಸರೇ ಇಲ್ಲದಿರುವಂತೆ, ಅನಾಹತಚಕ್ರಭೇದನೆಯಾಗಿ ನಮ್ಮೊಳಗೆ ಪೂರ್ಣ ತೇಜೋ ರೂಪಿನ ಸೂರ್ಯನ ಸ್ಥಿತಿಯನ್ನು ಧ್ಯಾನದಲ್ಲಿ ಪಡೆದರೆ, ನಮ್ಮಲ್ಲಿರುವ ತಮೋಗುಣದ ಉಪಾಧಿಯು ನಿವೃತ್ತಿಯಾಗುವುದು. ಅಂದರೆ ಪರಿವಾರ ಶಕ್ತಿಗಳೊಡನೆ ತಮೋ ಗುಣದ ಪ್ರಧಾನ ಶಕ್ತಿಯೂ ಮತ್ತು ರಜೋಗುಣದ ಪರಿವಾರದ ಶಕ್ತಿಗಳೂ ಬಿಂದು ಸಹಿತವಾದ ಓಂಕಾರೋಪಾಸನೆಯಿಂದ ದಂಡಿಸಲ್ಪಟ್ಟು ಅನಾಹತಚಕ್ರಭೇದನೆಯಾ ಗುವುದರೊಳಗೆ ಉಪಸಂಹರಿಸಲ್ಪಡುವುದೆಂಬ ತಾತ್ಪರ್ಯವಾಗಿರುವುದು. ಈಗಿನ ತೇಜೋನಾದಧ್ಯಾನದ ಸೋಪಾನದಲ್ಲಿ ರಜೋಗುಣದ ಪ್ರಧಾನ ಶಕ್ತಿ (ವಿಕ್ಷೇಪ ಶಕ್ತಿ) ಯೊಂದೇ ಉಳಿದುಕೊಂಡು ಬುದ್ಧಿಗೆ ನಾದಾನುಸಂಧಾನವನ್ನು ತಪ್ಪಿಸಲು ವಿಷಯ ವಾಸನೆಗಳನ್ನು ತಂದೊಡ್ಡುವುದು ಈ ತೇಜೋನಾದಧ್ಯಾನದ ಸೋಪಾನದಲ್ಲಿ ಮನಸ್ಸು ಮತ್ತು ಪ್ರಾಣಶಕ್ತಿಗಳು ಬುದ್ಧಿಯಲ್ಲಿ ಉಪಶಾಂತತೆಯಿಂದ ನೆಲಸುವುದ ರಿಂದ ಬುದ್ಧಿಯೊಂದೇ ತೇಜೋನಾದವನ್ನು ಸೋಹಂಭಾವದಿಂದ ಧರಿಸಿಕೊಂಡು ಧ್ಯಾನ ಮಾಡುವುದು. ಬುದ್ಧಿಯು ಆತ್ಮಸಾಕ್ಷಾತ್ಕಾರವನ್ನು ಹೊಂದಲೇಬೇಕೆಂಬ ಪೂರ್ಣವಾದ ಬಯಕೆಯಿಂದ ನಾದದಲ್ಲಿ ತನ್ಮಯವಾಗುವುದರಿಂದ ರಜೋಗುಣ ಪ್ರಧಾನ ಶಕ್ತಿಯು ತಂದೊಡ್ಡುವ ವಿಷಯ ವಾಸನೆಗಳನ್ನು ಖಂಡಿಸುತ್ತಾ ಬರುವುದು.

ಈ ರೀತಿ ಬುದ್ಧಿಗೆ ದೃಢತರವಾದ ಆತ್ಮಜ್ಞಾನದ ಬಯಕೆ ಇಲ್ಲದಿದ್ದರೆ ಇದುವರಿಗೂ ಮಾಡಿದ ಸಾಧನೆಗಳು ಬೂದಿಯಲ್ಲಿ ಹೋಮ ಮಾಡಿದಂತೆ ಸಾರ್ಥಕವಾಗಲಾರವು. ಈ ತತ್ವವನ್ನು ಕೆಳಗಿನ ಶ್ರುತಿವಾಕ್ಯವು ಸಮರ್ಥಿಸುವುದು :—

**ನಾದಬಿಂದು ಸಹಸ್ರಾಣಿ ಯೋಗಕೋಟಿ ಶತಾನಿಚ |**
**ಸರ್ವಂ ತದ್ಭಸ್ಮನಿಹುತಂ ಆತ್ಮ ಜ್ಞಾನಂ ವಿನಾ ಧ್ರುವಂ |**

ತಾತ್ಪರ್ಯ ||—ತತ್ವಮಸಿ ಮುಂತಾದ ಮಹಾ ವಾಕ್ಯಗಳಿಂದ ಜನ್ಯವಾದನಾನೇ ಬ್ರಹ್ಮನೆಂಬ ನಿಶ್ಚಯವಾದ ತಿಳಿವಳಿಕೆಯನ್ನು ವೇದಾಂತ ಶ್ರವಣದಿಂದ ಹೊಂದಿ ಪರ ಬ್ರಹ್ಮನಲ್ಲಿ 'ನಾನು' ಎಂಬುದನ್ನು ಲಯಮಾಡಬೇಕೆಂಬ ದೃಢವಾದ ಉತ್ಕಟವಾದ ಇಚ್ಛೆಯಿಂದ ಧ್ಯಾನದಲ್ಲಿ ಮುಂದುವರಿಯದಿದ್ದರೆ ಧ್ಯಾನದಲ್ಲಿ ಧರಿಸಿದ್ದ ಸಾವಿರಾರು ನಾದಬಿಂದುಗಳೂ ಪ್ರಾಣಾಯಾಮ ಮುಂತಾದ ಯೋಗಗಳ ಕೋಟ್ಯಾಂತರ ಅಭ್ಯಾಸಗಳೂ ಬೂದಿಯಲ್ಲಿ ಮಾಡಿದ ಹೋಮದಂತೆ ನಿರರ್ಥಕವಾಗುವುವು.

ಮೇಲೆ ತಿಳಿಸಿದಂತೆ ಬುದ್ಧಿಯು ತೇಜೋನಾದದಲ್ಲಿ ನಿರತವಾಗಿದ್ದರೂ ಕಾಣುವ ತೇಜಸ್ಸು ಕೇಳುವ ನಾದಗಳೆರಡೂ ಪರಮಾತ್ಮನಲ್ಲವೆಂದು ಧ್ಯಾನದಲ್ಲಿ ಮುಂದುವರಿಯುತ್ತಾ ಹೋದರೆ, ಸುಷುಮ್ನಾನಾಡಿಯೊಳಗೇ ಅನಾಹತಚಕ್ರದಿಂದ ಮೇಲಕ್ಕಿರುವ ಆಕಾಶದ ತತ್ವವಾದ ವಿಶುದ್ಧಚಕ್ರವನ್ನು ಭೇದಿಸಿಕೊಂಡು ಆಜ್ಞಾಚಕ್ರದವರಿಗೆ ಹೋಗುವುದು. ಅನಂತರ ಆಜ್ಞಾಚಕ್ರವನ್ನು ದಾಟಿ ಮನುಷ್ಯ ಚಿತ್ರದಲ್ಲಿ ಶಿರಸ್ಸಿನೊಳಗೆ ಬರೆದಿರುವ 'ಓಂ' ಎಂಬ ಸ್ಥಳವನ್ನು ಸೇರುವುದು. ಈ ಓಂ ಎಂದು ಬರೆದಿರುವ ಸ್ಥಳವೇ ಪರಮಾತ್ಮನಿರುವ ಸ್ಥಳ. ಉಪನಿಷತ್ತಿನ ಆರನೇ ಅನುವಾಕದಲ್ಲಿರುವ ಕೆಲವು ಮಂತ್ರಗಳ ವಿಚಾರವನ್ನು ಈ ಸಂದರ್ಭದಲ್ಲಿ ವಿವರಿಸಬೇಕಾಗಿರುವುದರಿಂದ ಕೆಳಗೆ ವಿವರಿಸುವುದು.

**ಸ ಯ ಏಷೋಽನ್ತರ ಹೃದಯ ಆಕಾಶಃ**"ಎಂಬ ಮಂತ್ರದ ಭಾಷ್ಯದಲ್ಲಿ ಹೃದಯವೆಂದರೆ ಕಮಲದ ಆಕಾರವುಳ್ಳದ್ದಾಗಿ ಪ್ರಾಣಕ್ಕೆ ಆಶ್ರಯವಾಗಿ ಮೇಲ್ಗಡೆಗೆ ನಾಳ ಕೆಳಗಡೆಗೆ ಮುಖ ಇರುವುದೆಂದು ಹೇಳಿದೆ. ಪ್ರಾಣಕ್ಕೆ ಆಶ್ರಯವೆಂದರೆ ಪ್ರಾಣಮಯಕೋಶಕ್ಕೆ ಪ್ರಧಾನ ಸ್ಥಳವಾಗಿ ಎದೆಗೆ ಸರಿಯಾಗಿ ಬೆನ್ನಿನ ಹುರಿಯಲ್ಲಿರುವ ಅನಾಹತಚಕ್ರಸ್ಥಳವೆಂದು ಹಿಂದೆ ತಿಳಿಸಿರುತ್ತಷ್ಟೆ. ಮೇಲ್ಗಡೆಗೆ ನಾಳವುಳ್ಳದ್ದೆಂದರೆ ಹೃದಯದಿಂದ ಬೆನ್ನಿನ ಹುರಿಯಲ್ಲೇ ಮೇಲಕ್ಕೆ ಹೋಗಿರುವ ಸುಷುಮ್ನಾ ಎಂಬ ನಾಡಿಯುಂಟು. ಅದು ಯೋಗಶಾಸ್ತ್ರದಲ್ಲೂ ಪ್ರಸಿದ್ಧವಾಗಿದೆಯೆಂದು ಭಾಷ್ಯದಲ್ಲಿ ಹೇಳಿದೆ. ಈ ನಾಡಿಯು ಬೆನ್ನಿನ ಹುರಿಯಲ್ಲೇ ಮೇಲಕ್ಕೆ ಶಿರಸ್ಸಿನೊಳಕ್ಕೆ ಹೋಗಿರುವುದು. ಈ ನಾಡಿಗೆ ಸೇರಿದಂತೆ ಕಂಠದ ಸ್ಥಳದಲ್ಲಿ ವಿಶುದ್ಧಚಕ್ರವೂ ಭ್ರೂಮಧ್ಯಕ್ಕೆ ಸರಿಯಾಗಿ

ಶಿರಸ್ಸಿನ ಹಿಂದುಗಡೆ ಆಜ್ಞಾಚಕ್ರವೂ ಇರುವುದು. ಆಜ್ಞಾಚಕ್ರದ ಮೇಲ್ಗಡೆ ಶಿರಸ್ಸಿನೊಳಗೆ ನೆತ್ತಿಯ ಪ್ರದೇಶದಲ್ಲಿ 'ಓಂ' ಎಂಬ ಅಕ್ಷರವನ್ನು ಚಿತ್ರದಲ್ಲಿ ಬರೆದಿರುವುದು. ಈ 'ಓಂ' ಎಂಬ ಅಕ್ಷರವನ್ನು ಬರೆದಿರುವ ಶಿರಸ್ಸಿನ ಮೊದಳಿನ ಸ್ಥಳವೇ ಹೃದಯಾಕಾಶವೆಂದರೆ ಎದೆಯಲ್ಲಿರುವ ಹೃದಯದ ಒಳಗಿನ ಆಕಾಶವು. ಇದೇ ಪರಬ್ರಹ್ಮವಿರುವ ಸ್ಥಾನ. ಮೇಲೆ ತಿಳಿಸಿರುವ ವಿಶುದ್ಧಚಕ್ರ, ಆಜ್ಞಾಚಕ್ರ, ಹೃದಯಾಕಾಶವೆನಿಸುವ ಓಂಕಾರ ಸ್ಥಳಗಳನ್ನು ಇಲ್ಲಿ ಕೊಟ್ಟಿರುವ ಮನುಷ್ಯ ಚಿತ್ರದಲ್ಲಿ ಬರೆದಿರುವುದು.

ಹೃದಯಾಕಾಶಕ್ಕೆ "ಕರಕಾಕಾಶವತು, ಅಂದರೆ ಕಮಂಡಲುವಿನೊಳಗಿನ ಆಕಾಶದಂತೆ" ಎಂಬ ಉದಾಹರಣೆಯನ್ನು ಭಾಷ್ಯದಲ್ಲಿ ಹೇಳಿದೆ. ಇದನ್ನು ವಿವರಿಸೋಣ. ಯತಿಗಳು ಜಲಪಾನಮಾಡಲು ಮತ್ತು ಅಹನ್ನೀಕಮಾಡಲು ಕಮಂಡಲ ಎಂಬ ಹಿತ್ತಾಳೆಯ ಪಾತ್ರೆಯನ್ನು ಹೊಂದಿರುತ್ತಾರೆ. ಧೂಳು, ಕಸ, ಮುಂತಾದ್ದು ಬೀಳದಂತೆ ಕಮಂಡಲಪಾತ್ರೆಗೆ ಮೇಲೆ ಮುಚ್ಚಳವೂ ಇರುವುದು. ಈ ಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಳ್ಳಲು ಕಮಾನಿನಂತೆ ಇರುವ ಹಿಡಿಯೂ ಮೇಲ್ಭಾಗದಲ್ಲಿ ಇರುವುದು. ಈ ಪಾತ್ರೆಗೆ ಆನೆಯು ತನ್ನ ಸೊಂಡಲನ್ನು ಅರ್ಧ ಮೇಲಕ್ಕೆ ಎತ್ತಿ ಕೊನೆಯನ್ನು ಕೊಂಚ ಬಗ್ಗಿಸಿದರೆ ಹೇಗಿರುವುದೊ ಹಾಗೆ ಆನೆಯ ಸೊಂಡಿಲನಂತೆ ಒಂದು ಹಿತ್ತಾಳೆ ಕೊಳವೆಯನ್ನು ಪಾತ್ರೆಯ ಹೊರಪ್ರಾಕಾರದ ಮಧ್ಯಭಾಗದ ತಗಡಿನಲ್ಲಿ ಸಂಧಿಮಾಡಿ ಈ ಕೊಳವಿಯನ್ನು ಬೆಸೆದಿರುತ್ತಾರೆ. ಪಾತ್ರೆಯಲ್ಲಿರುವ ನೀರು ಈ ಕೊಳವಿಯ ಮೂಲಕ ಬರುವುದು. ಪಾನಮಾಡುವುದಕ್ಕೂ ಮತ್ತು ಅಹನ್ನೀಕಕ್ಕೂ ಈ ಕೊಳವಿಯಿಂದ ಬರುವ ನೀರನ್ನು ಉಪಯೋಗಿಸುತ್ತಾರೆ. ಸೌಕರ್ಯಕ್ಕೋಸ್ಕರ ಈ ಕೊಳವಿಯನ್ನು ಪಾತ್ರೆಗೆ ಸೇರಿಸಿರುತ್ತಾರೆ: ಈ ಕೊಳವಿಯ ತುದಿಯಲ್ಲಿ ಕೊಳವಿಗೆ ಮುಚ್ಚಳವೂ ಇರಬಹುದು.

ಮೇಲಿನ ಉದಾಹರಣೆಯನ್ನು ಶಿರಸ್ಸಿನೊಳಗೆ ಹೃದಯಾಕಾಶವೆನಿಸುವ ಆಕಾಶದ ತತ್ವಕ್ಕೂ ಸುಷುಮ್ನಾನಾಡಿಗೂ ಅನ್ವಯಿಸೋಣ. ಮುಚ್ಚಳದೊಡಗೂಡಿದ ಕಮಂಡಲವೆ ಶಿರಸ್ಸಿನೊಳಗೆ ಮೊದಳು ಇರುವ ಸ್ಥಳದ ಅವಕಾಶವಾಗಿರುವುದು. ಇದೇ ಹೃದಯದ ಅಂತದಲ್ಲಿರುವ ಆಕಾಶದ ತತ್ವವಾಗಿರುವುದು. ಈ ಸ್ಥಳಕ್ಕೆ ದಹರಾಕಾಶ, ಪರಮಾಕಾಶ, ವಿಷ್ಣುಪದ, ಓಂಕಾರ, ಸ್ವಾರಾಜ್ಯ, ಸಹಸ್ರಾರಗಳೆಂಬ ಹೆಸರುಗಳು ಶ್ರುತಿಯಲ್ಲಿ ಇವೆ. ಕಮಂಡಲಕ್ಕೆ ನೀರಿನ ಕೊಳವಿಯು ಹೇಗಿರುವುದೊ ಹಾಗೆಯೇ ಹೃದಯದ ಅಂತದಲ್ಲಿ ಶಿರಸ್ಸಿನಲ್ಲಿರುವ ಆಕಾಶಕ್ಕೆ ಸುಷುಮ್ನಾನಾಡಿಯೆಂಬ ಕೊಳವಿಯು ಇರುವುದು. ಈ ಕೊಳವಿಯ ತುದಿಯು ಹೃದಯ ಕಮಲವೆನಿಸುವ ಅನಾಹತಚಕ್ರದಲ್ಲಿ ಇರುವುದು. ಅಂದರೆ ಶಿರಸ್ಸಿನೊಳಗೆ ಇರುವ ಹೃದಯಾಕಾಶದಿಂದ ಹೊರಟ

ಸುಷುಮ್ನಾನಾಡಿಯು ಬೆನ್ನಿನ ಹುರಿಯಲ್ಲಿ ಕೆಳಕ್ಕೆ ಹೃದಯಕಮಲವೆನಿಸುವ ಅನಾಹತಚಕ್ರದವರೆವಿಗೂ ಇರುವುದು.

ಅನಾಹತಚಕ್ರವು ಮಾಂಸಪಿಂಡವಾದ ಹೃದಯಕೋಶವು ಒಂದಕ್ಕೊಂದು ಅಂಟಿಕೊಂಡು ಏಕತ್ವವಾಗಿರುವುದು. ಹೃದಯ ಕಮಲವೆನಿಸುವ ಅನಾಹತಚಕ್ರವು ಮನುಷ್ಯರಲ್ಲಿ ಅಧೋಮುಖವಾಗಿರುವುದರಿಂದ ಕಮಂಡಲದ ಕೊಳವಿಯ ತುದಿಯನ್ನು ಮುಚ್ಚಿದಂತಾಗಿರುವುದು. ಅಧೋಮುಖವಾಗಿರುವ ಹೃದಯಕಮಲವೆನಿಸುವ ಅನಾಹತಚಕ್ರವು ಧ್ಯಾನಯೋಗಾನುಷ್ಠಾನದಿಂದ ಊರ್ಧ್ವಮುಖವಾಗುವ ತತ್ವವೆ ಕಮಂಡಲದ ಕೊಳವಿಯ ತುದಿಯಲ್ಲಿ ಮುಚ್ಚಿರುವುದನ್ನು ತಿಗೆಸುವಿಕೆಯಾಗಿದೆ.

ಮೇಲಗಡೆಯೂ ಮುಚ್ಚಳವನ್ನು ಮುಚ್ಚಿರುವ ಕಮಂಡಲದೊಳಕ್ಕೆ ಕೊಳವಿಯ ದಾರಿಯೊಂದೇ ಇರುವಂತೆ ಶಿರಸ್ಸಿನೊಳಗಿರುವ ಪರಮಾತ್ಮಸ್ಥಾನವಾದ ಹೃದಯಾಕಾಶಕ್ಕೆ ಹೋಗಲು ಸುಷುಮ್ನಾನಾಡಿಯು ದಾರಿಯೊಂದೇ ಹೊರತು ಬೇರೆ ದಾರಿಯೆ ಇಲ್ಲ. ಕಮಂಡಲದೊಳಗಿನ ಆಕಾಶಕ್ಕೆ (ಅವಕಾಶಕ್ಕೆ) ಕಮಂಡಲದ ಹಿತ್ತಾಳೆ ತಗಡು ಹೇಗೆ ಆವರಣವಾಗಿದೆಯೊ ಹಾಗೆಯೆ ಶಿರಸ್ಸಿನೊಳಗಿನ ಮೆದಳು ಸ್ಥಳದ ಸುತ್ತಲೂ ತಮೋ ಆವರಣವಿದೆ. ಈ ಗ್ರಂಥವಲ್ಲಿ ಕೊಟ್ಟಿರುವ ಮನುಷ್ಯ ಚಿತ್ರದಲ್ಲಿ ಈ ಆವರಣವನ್ನು ಗುರುತಿಸಿದೆ. ಈ ಆವರಣಕ್ಕೆ ಕಾರಣಶರೀರವೆಂದು ವೇದಾಂತದಲ್ಲಿ ಹೆಸರಿರುವುದು. ಈ ಆವರಣವು ಕಮಂಡಲದ ಕೊಳವಿಯ ತಗಡಿನ ರೂಪವಲ್ಲೂ ಇದ್ದು ಹೃದಯಕಮಲವಾದ ಅನಾಹತಚಕ್ರದವರಿಗೂ ಇರುವುದಲ್ಲದೆ ಅನಾಹತಚಕ್ರದಿಂದ ಕೆಳಕ್ಕೂ ಮೂಲಾಧಾರಚಕ್ರದವರಿಗೂ ಇರುವುದು. ಅಂದರೆ ಸುಷುಮ್ನಾನಾಡಿಯು ಶಿರಸ್ಸಿನೊಳಗಿರುವ ಹೃದಯಾಕಾಶದಿಂದ ಪ್ರಾರಂಭವಾಗಿ ಮೂಲಾಧಾರಚಕ್ರದವರಿಗೂ ಇರುವುದು. ಈ ತತ್ವವನ್ನು ಕೆಳಗಿನ ಉಪನಿಷದ್ವಾಕ್ಯಗಳು ಸಮರ್ಥಿಸುವುವು.

ದರ್ಶನೋಪನಿಷತ್ತಿನಲ್ಲಿ—

**ಪೃಷ್ಠಮಧ್ಯಸ್ಥಿತೇ ನಾಸ್ಥ್ನಾ ವೀಣಾದಂಡೇನ ಸುವ್ರತ ।**

**ಸಹಮಸ್ತಕ ಪರ್ಯಂತಂ ಸುಷುಮ್ನಾ ಸಂಪ್ರತಿಷ್ಠಿತಾ ।**

**ತಾತ್ಪರ್ಯ** :—ಎಲೈ ಪಂಡಿತನೆ! ಪ್ರಷ್ಠಮಧ್ಯೆ ವೀಣಾದಂಡದಂತೆ ಇರುವ ಮೂಳೆಯು ಶಿರಸ್ಸಿನವರಿಗೂ ಹೋಗಿರುವುದು. ಇದರಲ್ಲಿ ಸುಷುಮ್ನಾನಾಡಿಯು ಬಹು ಚೆನ್ನಾಗಿ ನೆಲೆಸಿರುವುದು ಎಂದು ಹೇಳಿರುವುದು.

ಶಾಂಡಿಲ್ಯೋಪನಿಷತ್ತಿನಲ್ಲಿ—

**ಗುದಸ್ಯ ಪೃಷ್ಠಭಾಗೇಽಸ್ಮಿನ್ ವೀಣಾದಂಡ ಸ್ಸದೇಹಭೃತ್ ।**
**ದೀರ್ಘಾಸ್ಥಿ ದೇಹಪರ್ಯಂತಂ ಬ್ರಹ್ಮನಾಡೀತಿ ಕಥ್ಯತೆ ।**
**ಉಚ್ಚಾರಯೇತ್ಪರಾಂಶಕ್ತಿಂ ಬ್ರಹ್ಮರಂಧ್ರ ನಿವಾಸಿನೀಂ ।**

**ತಾತ್ಪರ್ಯ** ||—ಗುದದ ಹಿಂದೆ ದೇಹವನ್ನು ಧರಿಸಿರುವ ವೀಣಾದಂಡದಂತೆ ದೀರ್ಘವಾದ ಮೂಳೆಯು ಶಿರಸ್ಸಿನವರಿಗೂ ಇರುವುದು. ಇದರಲ್ಲಿ ಬ್ರಹ್ಮರಂಧ್ರ (ಸುಷುಮ್ನಾ) ನಾಡಿಯು ಇರುವುದು. ಈ ನಾಡಿಯೊಳಗಿರುವ ಪರಾಶಕ್ತಿಯನ್ನೆಂದರೆ ಓಂಕಾರವನ್ನು ಉಚ್ಚರಿಸಬೇಕು ಎಂದು ಹೇಳಿರುವುದು.

ಹೀಗೆ ಮೂಲಾಧಾರಚಕ್ರದವರಿಗೂ ಇರುವ ಸುಷುಮ್ನಾನಾಡಿಯ ದ್ವಾರವನ್ನು ಮೂಲಾಧಾರಚಕ್ರದಲ್ಲಿ ಶ್ರೀ ಕುಂಡಲಿನೀಶಕ್ತಿಯು ಮುಚ್ಚಿಕೊಂಡಿತ್ತು. ಹೀಗೆ ಮುಚ್ಚಿರುವ ಸುಷುಮ್ನಾನಾಡಿಯ ದ್ವಾರವನ್ನು ತೆಗೆಸುವ ವಿಚಾರವು ಹಿಂದೆ ೬ನೇ ಪ್ರಕರಣದಲ್ಲಿ ಬಂದಿರುವುದು. ಮೂಲಾಧಾರಚಕ್ರದಿಂದ ಶಿರಸ್ಸಿನಲ್ಲಿರುವ ಹೃದಯಾಕಾಶದವರಿಗೂ ಆರು ಬಾಗಿಲುಗಳಂತೆ ಆರು ಚಕ್ರಗಳಿವೆ. ಇವುಗಳಲ್ಲಿ ಮೂಲಾಧಾರ ಮತ್ತು ಅನಾಹತ ಚಕ್ರಗಳೆರಡೂ ಬಹು ಮುಖ್ಯವಾದವುಗಳು. ಹೃದಯಕಮಲವೆನಿಸುವ ಅನಾಹತ ಚಕ್ರದ ಬಾಗಿಲನ್ನು ತೆಗೆಸುವಿಕೆಯು ಈ ಪ್ರಕರಣದಲ್ಲೇ ಬಂದಿದೆ. ಕಮಂಡಲದ ಕೊಳವಿಯ ತುದಿಗೆ ಕಮಂಡಲದ ಒಳಗಿರುವ ಹೇಗೆ ಅವಕಾಶವು ಒಳಗಿನ ಆಕಾಶವಾಗುವುದೊ ಹಾಗೆಯೆ ಎದೆಯ ಸ್ಥಳಕ್ಕೆ ಸರಿಯಾಗಿ ಬೆನ್ನಿನ ಹುರಿಯಲ್ಲಿರುವ ಹೃದಯಕಮಲಕ್ಕೆ ಶಿರಸ್ಸಿನೊಳಗೆ ಇರುವ ಅವಕಾಶವು ಹೃದಯದ ಒಳಗಿನ ಆಕಾಶವಾಗಿರುವುದು.

"**ಕಮಂಡಲುವಿನೊಳಗಿನ ಆಕಾಶದಂತೆ**" ಎಂದು **ಭಾಷ್ಯದಲ್ಲಿ** ಇರುವುದನ್ನು ವಿವರಿಸಲು ಇಷ್ಟು ಬರಿಯಬೇಕಾಯಿತು. ಈ ಶಿರಸ್ಸಿನೊಳಗಿರುವ ಹೃದಯಾಕಾಶಕ್ಕೆ "ಗುಹೆ' ಎಂಬ ಹೆಸರೂ ಇದೆ. ಇದನ್ನು ಮುಂದೆ ವಿವರಿಸಿರುವುದು. ಹೃದಯಕಮಲವೆನಿಸುವ ಅನಾಹತಚಕ್ರವು ಮಾಂಸಪಿಂಡದಂತೆ ಎದೆಯ ಸ್ಥಳದಲ್ಲಿರುವ ಹೃದಯಕೋಶಕ್ಕೆ ಸಂಬಂಧಪಟ್ಟಿದ್ದರೂ ಇದನ್ನು ಎಕ್ಸ್‌ರೇ ಮುಂತಾದ ಯಂತ್ರಗಳಿಂದ ನೋಡಲು ಸಾಧ್ಯವಿಲ್ಲ. ಇದು **ಶಕ್ತಿರೂಪದಲ್ಲಿ** ಇರುವುದರಿಂದ ಚರ್ಮಚಕ್ಷುಸ್ಸಿಗೆ ಗೋಚರವಾಗುವುದಿಲ್ಲ. "**ಸ್ಥಾನಾನೇತಾನಿ ದೇಹೇಽಸ್ಮಿನ್ ಶಕ್ತಿರೂಪಂ ಪ್ರಕಾಶತೆ**" ಎಂಬ ಉಪನಿಷತ್ ಪ್ರಮಾಣದಂತೆ ಸುಷುಮ್ನಾ ಮುಂತಾದ ನಾಡಿಗಳು **ಚಕ್ರಗಳು ಶಕ್ತಿರೂಪದಲ್ಲಿ ಇರುತ್ತವೆ.**

**"ವ್ಯಪೋಹ ಶೀರ್ಷಕಪಾಲೇ"** ಎಂದರೆ ಸುಷುಮ್ನಾ ನಾಡಿಯು ಬೆನ್ನಿನ ಹುರಿಯಲ್ಲೇ ಚಿತ್ರದಲ್ಲಿ ತೋರಿಸಿರುವಂತೆ ಕಂಠದ ಹಿಂಭಾಗದ ಕೊಂಚ ಮೇಲುಗಡೆಯಲ್ಲಿ ತಲೆಬುರುಡೆಯು ಎಡಬಲ ಭಾಗಗಳಾಗಿದ್ದು ಕೂಡಿಕೊಂಡಿರುವ ಕಪಾಲದ ಮಧ್ಯದಲ್ಲಿ ಮಿದುಳು ಬಳ್ಳಿಯೊಳಗೆ ನುಗ್ಗಿ ಶಿರಸ್ಸಿನ ಮಿದುಳಿಗೆ ಪ್ರವೇಶಿಸಿರುವುದು. ಕಪಾಲವೆಂದರೆ ನೆತ್ತಿಯ ಚಿಪ್ಪು. ನೆತ್ತಿಯಿಂದ ಮುಂದುಗಡೆ ಹಣೆಯವರೆಗೂ ಹಿಂದುಗಡೆ ಶಿರಸ್ಸಿನ ಹಿಂಭಾಗದವರೆಗೂ ಗರ್ಭದಲ್ಲಿ ಶಿಶುವಿನಲ್ಲಿ ಶೀಳಿದಂತೆ ಕಪಾಲವು ಎರಡು ಭಾಗವಾಗಿದ್ದು ಅನಂತರ ಕೂಡಿಕೊಳ್ಳುವುದೆಂತ ಆಧುನಿಕ ವೈದ್ಯಶಾಸ್ತ್ರವು ತಿಳಿಸುವುದು. ಎರಡು ಭಾಗವಾಗಿ ಶೀಳಿದ ಹಾಗೆ ಇದ್ದು ಕೂಡಿಕೊಂಡಿರುವ ಸ್ಥಳವೇ **"ವ್ಯಪೋಹ ಶೀರ್ಷಕಪಾಲೇ"** ಎಂಬುದರ ತತ್ವವಾಗಿದೆ.

ಸುಷುಮ್ನಾ, ಸೂರ್ಯ, ಚಂದ್ರನಾಡಿಗಳು ಮೂಲಾಧಾರಾದಿ ಆರು ಕಮಲಗಳು ಬೆನ್ನಿನ ಹುರಿಯಲ್ಲಿ ಇದ್ದರೂ **"ಸ್ಥಾನಾನೇತಾನಿ ದೇಹೇಸ್ಮಿನ್ ಶಕ್ತಿರೂಪಂ ಪ್ರಕಾಶತೆ"** ಎಂಬ ಶ್ರುತಿ ಪ್ರಮಾಣದಂತೆ ಶಕ್ತಿರೂಪದಲ್ಲಿರುವುದರಿಂದ ಕಣ್ಣಿಗೆ ಗೋಚರವಾಗುವುದಿಲ್ಲ. ಧ್ಯಾನಯೋಗಿಗಳಿಗೆ ಅನುಭವದಿಂದ ಮಾತ್ರ ತಿಳಿಯಲು ಸಾಧ್ಯವಾದುದು.

**"ಅನ್ತರೇಣ ತಾಲುಕೇ । ಯ ಏಷ ಸ್ತನ ಇವಾವಲಮ್ಬತೇ ।"** ಸುಷುಮ್ನಾ ನಾಡಿಯು ಚಿತ್ರದಲ್ಲಿ ಗುರುತಿಸಿರುವಂತೆ ಕಂಠದ ಹಿಂಭಾಗದ ಬೆನ್ನಿನ ಹುರಿಯಿಂದ ಮೇಲಕ್ಕೆ ಇರುವ ಮಿದುಳು ಬಳ್ಳಿಯೊಳಕ್ಕೆ ನುಗ್ಗಿ **'ಓಂ'** ಕಾರವನ್ನು ಬರೆದಿರುವ ಶಿರಸ್ಸಿನ ಸ್ಥಳಕ್ಕೆ ಪ್ರವೇಶಿಸುವುದೆಂತ ಮೇಲೆ **"ವ್ಯಪೋಹ್ಯ ಶೀರ್ಷಕಪಾಲೇ"** ಎಂಬ ಮಂತ್ರದ ತಾತ್ಪರ್ಯದಲ್ಲಿ ಬರೆದಿರುತ್ತಷ್ಟೆ! ಹೀಗೆ ಸುಷುಮ್ನಾನಾಡಿಯು ಶಿರಸ್ಸಿನೊಳಕ್ಕೆ ಪ್ರವೇಶಿಸಿರುವ ಸ್ಥಳವು ನಮ್ಮ ಬಾಯಿಯ ಒಳಗೆ ತಾಲುವೆಂದರೆ ಅಂಗಳಿನ ನಡುವೆ ಮೊಲೆಯ ತೊಟ್ಟಿನಂತೆ (ಸ್ತನದಂತೆ) ಜೋಲಾಡುತ್ತಿರುವ ಯಾವ ಮಾಂಸ ಖಂಡ ಇರುವುದೋ ಅಂತಹ ತಾಲುಮೂಲದ ಮೇಲಿನ ಸ್ಥಳಕ್ಕೆ ಸರಿಯಾಗಿರುವುದು. ಈಸ್ಥಳದಿಂದ ಸುಷುಮ್ನಾನಾಡಿಯು ಮೇಲಕ್ಕೆ **"ಓಂ"** ಅಕ್ಷರವನ್ನು ಬರೆದಿರುವ ಹೃದಯಾಕಾಶಕ್ಕೆ ಪ್ರವೇಶಿಸಿರುವುದು. ಭ್ರೂಮಧ್ಯಕ್ಕೆ ಸರಿಯಾಗಿ ಶಿರಸ್ಸಿನ ಹಿಂಭಾಗದಲ್ಲಿ ಆಜ್ಞಾಚಕ್ರವೆಂದು ಚಿತ್ರದಲ್ಲಿ ಬರೆದಿದೆ. ಈ ಸ್ಥಳವು ತಾಲುಮೂಲದ ಮೇಲಿನ ಸ್ಥಳಕ್ಕೆ ಸರಿಯಾಗಿರುತ್ತದೆ.

**"ಸೇನ್ದ್ರಯೋನಿಃ"** । ಮೇಲೆ ತಿಳಿಸಿದ ತಾಲುಮೂಲದ ಮೇಲಿನ ಸ್ಥಳವು ಇನ್ದ್ರ ಅಂದರೆ ಪರಮೈಶ್ವರ್ಯಶಾಲಿಯಾದ ಈಶ್ವರನ ಸ್ಥಳವಾಗಿಯೂ ಪರಬ್ರಹ್ಮ ಸ್ವರೂಪವನ್ನು ಪಡೆದುಕೊಳ್ಳುವುದಕ್ಕೆ ಬಾಗಿಲಾಗಿಯೂ ಇರುವುದೆಂದು ಭಾಷ್ಯದಲ್ಲಿಯೇ

ಇದೆ. ಅಂದರೆ ಈಶ್ವರಸೋಪಾನದ ಮೂಲಕವಾಗಿಯೇ ಪರಬ್ರಹ್ಮಸ್ವರೂಪವಾದ ಓಂಕಾರವನ್ನು ಪಡೆಯಬೇಕೆಂಬ ತತ್ವವಾಗಿರುವುದು.

**"ಯತ್ರಾಸೌ ಕೇಶಾನ್ತೋ ವಿವರ್ತತೇ ।"** ಅಂದರೆ ಭ್ರೂಮಧ್ಯಕ್ಕೆ ಸರಿಯಾಗಿ ಹಣೆಯ ಮೇಲುಗಡೆಯಿಂದ ನೆತ್ತಿಯವರಿಗೆ ಕೂದಲುಗಳನ್ನು ಎರಡು ಕಡೆಗೂ ಬಾಚಿ ವಿಂಗಡಿಸುವಸ್ಥಳ. ಇದಕ್ಕೆ ಬೈತಲೆಯೆಂದೂ ಹೆಸರು. ಇಂತಹ ಬೈತಲೆಯ ತುದಿಯು ಇರುವ ಸ್ಥಳವೆಂದರೆ ಮೂರ್ಧಪ್ರದೇಶ ಅಥವಾ ನೆತ್ತಿ. ತಲೆಯಲ್ಲಿ ಬೆಳೆಯುವ ಕೂದಲು ನೆತ್ತಿಯ ಸ್ಥಳದಿಂದಲೇ ಹಿಂಭಾಗಕ್ಕೂ ಮುಂಭಾಗಕ್ಕೂ ಸ್ವಾಭಾವಿಕವಾಗಿ ಬೆಳೆದು ಭಾಗಗಳಾಗುತ್ತವೆ. ಆದುದರಿಂದ ನೆತ್ತಿಯ ಸ್ಥಳವೇ ಕೂದಲು ವಿಭಾಗವಾಗುವ ಸ್ಥಳ. ದೇಹವನ್ನು ಸೃಷ್ಟಿಸಿ ದೇಹದಲ್ಲಿ ತಾನು ಪ್ರವೇಶಮಾಡಲು ಪರಮೇಶ್ವರನು ನೆತ್ತಿಯಲ್ಲಿ ರಂಧ್ರವನ್ನುಮಾಡಿಕೊಂಡು ದೇಹಕ್ಕೆ ಪ್ರವೇಶಿಸಿದನೆಂದು ಐತರೇಯೋಪನಿಷತ್ತಿನಲ್ಲೂ ಹೇಳಿದೆ. ಚಿತ್ರದಲ್ಲಿ "ಓಂ" ಎಂಬ ಅಕ್ಷರವನ್ನು ಬರೆದಿರುವ ಸ್ಥಳವೂ, ಶಿರಸ್ಸಿನೊಳಗೆ ನೆತ್ತಿಯ ಸ್ಥಳಕ್ಕೆ ಸರಿಯಾಗಿದೆ. ಮಕ್ಕಳು ಜನಿಸಿದಾಗ ನೆತ್ತಿಯ ಚಿಪ್ಪಿನ ಸ್ಥಳವು ತೆಳ್ಳನೇ ಪೊರೆಯಂತೆ ಇದ್ದು ಕ್ರಮೇಣ ಘಟ್ಟಿಯಾದ ಮೂಳೆಯಾಗುತ್ತದೆ. ಆದುದರಿಂದ ಮೇಲಿನ ಶ್ರುತಿ ಪ್ರಮಾಣಗಳನ್ನು ಅನುಸರಿಸಿ ಚಿತ್ರದಲ್ಲಿ ಶಿರಸ್ಸಿನೊಳಗೆ "ಓಂ" ಎಂಬ ಅಕ್ಷರವನ್ನು ಬರೆದಿರುವ ಸ್ಥಳವೇ ಹೃದಯದ ಆಕಾಶವೆನಿಸಿ ಪರಬ್ರಹ್ಮನಿಗೆ ಸ್ಥಾನವಾಗಿದೆ. ಅಂದರೆ ನಮ್ಮ ಬುದ್ಧಿವೃತ್ತಿಯು ಈ ಸ್ಥಳದಲ್ಲೇ ಪರಬ್ರಹ್ಮತ್ವವನ್ನು ಹೊಂದಬೇಕಾಗಿರುವುದರಿಂದ ಈ ಸ್ಥಳದಲ್ಲಿ ಹಿರಣ್ಮಯನಾದ ಅಂದರೆ ಸ್ವಯಂಪ್ರಕಾಶರೂಪನಾದ ಅಮೃತರೂಪನಾದ ಜ್ಞಾನರೂಪನಾದ ದೇಹದಲ್ಲಿರುವುದರಿಂದ ಪುರುಷನೆನಿಸಿಕೊಳ್ಳುವ ಪರಬ್ರಹ್ಮನಿಗೆ ಸ್ಥಾನವೆಂದು ಉಪನಿಷತ್ತಿನಲ್ಲಿ ಹೇಳಿದೆ.

ಈ ಉಪನಿಷತ್ತಿನ ಆನಂದವಲ್ಲಿಯ ಪ್ರಥಮ ಮಂತ್ರದಲ್ಲಿ,

**"ಸತ್ಯಂಜ್ಞಾನ ಮನನ್ತಂ ಬ್ರಹ್ಮ। ಯೋ ವೇದ ನಿಹಿತಂ**
**ಗುಹಾಯಾಂ ಪರಮೇ ವ್ಯೋಮನ್ ।"**

ಅಂದರೆ ಪರಬ್ರಹ್ಮವು ಗುಹೆಯ ಪರಮಾಕಾಶದಲ್ಲಿ ಇರುವುದು ಎಂದು ಹೇಳಿರುತ್ತಷ್ಟೆ. ಈ ಗುಹೆಯ ಸ್ಥಳವೇ ಮನುಷ್ಯನ ಚಿತ್ರದಲ್ಲಿ ಶಿರಸ್ಸಿನಲ್ಲಿ ಬರೆದಿರುವ ಸ್ಥಳವಾಗಿದೆ. "ಗುಹೂ ಸಂವರಣೇ ಮುಚ್ಚು" ಎಂಬ ಅರ್ಥದಂತೆ ಗುಹೆಯ ಸ್ಥಳವು ಆವರಣಗಳಿಂದ ಮುಚ್ಚಿರುವುದು. ಇದರಂತೆ ಶಿರಸ್ಸಿನಲ್ಲಿ 'ಓಂ' ಕಾರವಿರುವ ಪರಮಾಕಾಶ ಸ್ಥಳವು ಪಂಚಕೋಶಗಳಿಂದ ಮುಚ್ಚಲ್ಪಟ್ಟಿರುವುದು. ಪರಮಾಕಾಶವಾದ ಈ ಸ್ಥಳಕ್ಕೆ ಆನಂದಮಯಕೋಶ ಮೊದಲನೇ ಆವರಣ. ಈ ಆನಂದಮಯ ಕೋಶದಲ್ಲೇ

ನಿದ್ರಾವಸ್ಥೆಯನ್ನುಂಟುಮಾಡುವ ಕಾರಣ ಶರೀರವೆನಿಸುವ ತಮಸ್ಸಿನ ಆವರಣವು ಇರುವುದು. ಮನುಷ್ಯ ಚಿತ್ರದ ಶಿರಸ್ಸಿನಲ್ಲಿ ಕಮಲ ಪುಷ್ಪದ ಮೇಲೆ ದುಂಡಾದ ರೇಖೆಯನ್ನು ಬರೆದಿರುವುದು. ಇದೇ ಕಾರಣ ಶರೀರವೆನಿಸುವ ತಮಸ್ಸಿನ ಆವರಣ, ಪರಮಾಕಾಶ ಸ್ಥಳಕ್ಕೆ ವಿಜ್ಞಾನಮಯಕೋಶವು ಎರಡನೇ ಆವರಣ, ಮನೋಮಯ ಕೋಶವೇ ಮೂರನೇ ಅವರಣ, ಪ್ರಾಣಮಯ ಕೋಶವೇ ನಾಲ್ಕನೆಯ ಆವರಣ, ಅನ್ನಮಯಕೋಶ (ಸ್ಥೂಲದೇಹ) ವೇ ಐದನೇ ಆವರಣ. ಈ ಐದು ಆವರಣಗಳಿಂದ ಶಿರಸ್ಸಿನಲ್ಲಿರುವ "ಓಂ" ಸ್ಥಳ ಅಥವಾ ಪರಮಾಕಾಶವು ಮುಚ್ಚಲ್ಪಟ್ಟಿರುವುದು.

ಈ ಗುಹೆಗೆ ಪ್ರವೇಶಿಸಲು ಸುಷುಮ್ನಾನಾಡಿಯು ದ್ವಾರ ಹೊರತು ಬೇರೆ ದ್ವಾರವೇ ಇಲ್ಲ- ನಮ್ಮ ಬುದ್ಧಿಯು ಅಂದರೆ ಅಂತಃಕರಣವು ಚಿತ್ರದಲ್ಲಿ ಗುರುತಿಸಿರುವಂತೆ ಶಿರಸ್ಸಿನಲ್ಲಿ ಪರಮಾಕಾಶಸ್ಥಳದಲ್ಲಿದ್ದರೂ ವೃತ್ತಿಯುಂಟಾಗಿ ವಿಚ್ಛಕ್ತಿಯೇ ಇಲ್ಲದೆ ಜಾಗ್ರತ್ಸ್ವಪ್ನ ಸುಷುಪ್ತಿಯ ಸ್ವರೂಪವಾದ ಅವಿದ್ಯಾಬಂಧನದಲ್ಲಿರುವುದು. ಬುದ್ಧಿವೃತ್ತಿಯು ಅವಿದ್ಯಾಕಟ್ಟಿನಿಂದ ಬಿಡಿಸಿಕೊಳ್ಳಲು ಸುಷುಮ್ನಾನಾಡಿಯ ಮೂಲಕ ಶಿರಸ್ಸಿನಲ್ಲಿ ಪರಮಾಕಾಶದಲ್ಲಿರುವ ಪರಬ್ರಹ್ಮವನ್ನು ಸೇರಬೇಕು. ಪರಬ್ರಹ್ಮನು ಸರ್ವವ್ಯಾಪಿಯಾದ್ದರಿಂದ ಇಂತಹಕಡೆ ಇರುತ್ತಾನೆ, ಇಂತಹ ಕಡೆ ಇಲ್ಲವೆಂದು ಹೇಳುವ ಉದ್ದೇಶವಲ್ಲ. ಯಾವ ಸ್ಥಳದಲ್ಲಿ ಬುದ್ಧಿವೃತ್ತಿಯು ನಮ್ಮ ದೇಹದಲ್ಲಿ ಪರಬ್ರಹ್ಮವನ್ನು ಸೇರಬಲ್ಲದೋ ಅಂತಹ ಸ್ಥಳವೇ ಪರಬ್ರಹ್ಮನಿಗೆ ಸ್ಥಾನವೆಂದು ಉಪನಿಷತ್ತು ತಿಳಿಸುತ್ತದೆ. **ಶಿರಸ್ಸಿನಲ್ಲಿರುವ ಈ ಸ್ಥಳಕ್ಕೆ ಹೃದಯಾಕಾಶ, ಪರಮಾಕಾಶ, ಅವ್ಯಾಕೃತಾಕಾಶ, ದಹರಾಕಾಶ, ಗುಹೆ, ಸಹಸ್ರಾರ ಕಮಲ, ಓಂಕಾರ ಸ್ಥಾನ, ಬ್ರಹ್ಮಪುರಿ, ವೈಕುಂಠ, ಕೈಲಾಸ, ಬ್ರಹ್ಮರಂಧ್ರ,** ಮುಂತಾದ ನಾಮಗಳೂ, ಉಪನಿಷತುಗಳಲ್ಲಿ ಇವೆಯೆಂದು ಹಿಂದೆಯೂ ತಿಳಿಸಿದೆ.

ಅಧಿಕಾರಿಯು ತನ್ನಲ್ಲೇ ಇರುವ ಮಧ್ಯಾಹ್ನದ ಪೂರ್ಣತೇಜಸ್ಸು ಮತ್ತು ಓಂಕಾರ ನಾದದ ಧ್ಯಾನದ ಸೋಪಾನಕ್ಕೆ ಬಂದಿರುತ್ತಾನಷ್ಟೆ! ಬಾಹ್ಯದಲ್ಲಿ ನಾವು ಕೇಳುವ ವೇದಗಾನ ಮತ್ತು ಸಂಗೀತಶ್ರವಣಗಳಲ್ಲಿ ಆನಂದವುಂಟಾಗುವಾಗ ಇವೆಲ್ಲಕ್ಕೂ ಮೂಲ ಕಾರಣವಾದ ಓಂಕಾರನಾದಾನುಸಂಧಾನದಲ್ಲಿ ಉದ್ಭವಿಸುವ ಆನಂದವನ್ನು ವರ್ಣಿಸಲು ಸಾಧ್ಯವಿಲ್ಲವೆಂದು ಶ್ರೀ ತಾಂಡವೇಶ್ವರನಿಗೇ ಗೊತ್ತೆಂದು ಶ್ರುತಿವಾಕ್ಯವು ತಿಳಿಸುವುದು.

**ನಾದಾನುಸಂಧಾನ ಸಮಾಧಿ ಭಾಜಾಂ ಯೋಗೀಶ್ವರಾಣಾಂ**
**ಹೃದಿ ವರ್ಧಮಾನಂ । ಆನಂದ ಮೇಕಂ ವಚಸಾಪ್ಯಗಮ್ಯಂ**
**ಜಾನಾತಿತಂ ಶ್ರೀ ಗುರುನಾಥ ಏಕಃ ॥**

**ತಾತ್ಪರ್ಯ**—ನಾದಾನುಸಂಧಾನದಲ್ಲಿ ಸಮಾಧಿಯನ್ನು ಅಭ್ಯಾಸಮಾಡತಕ್ಕ ಯೋಗಿಶ್ರೇಷ್ಠರ ಹೃದಯದಲ್ಲಿ ಉದ್ಭವಿಸುವ ಆನಂದವನ್ನು ಈ ವಿಧವಾದುದೆಂದು ಹೇಳುವುದಕ್ಕೂ ಸಾಧ್ಯವಿಲ್ಲ. ಶ್ರೇಷ್ಠವಾದ ಈ ಆನಂದಸ್ವರೂಪವು ಶ್ರೀ ತಾಂಡವೇಶ್ವರನಿಗೂ ಶ್ರೀ ಗೋಪಾಲಕೃಷ್ಣನಿಗೂ ಗೊತ್ತು–ಎಂದು ಹೇಳಿದೆ.

ಮಧ್ಯಾನ್ಹದ ಸೂರ್ಯನಿಗೆ ಪೂರ್ಣಕಿರಣಗಳಿದ್ದು ಸಾಯಂಕಾಲದ ಹೊತ್ತಿಗೆ ಕಿರಣರಹಿತನಾಗುತ್ತಾನೆ. ಇದರಿಂದ ಅಧಿಕಾರಿಯು ತೇಜೋನಾದ ಧ್ಯಾನಾಭ್ಯಾಸದಲ್ಲಿ ಮುಂದುವರೆಯುತ್ತಾಬಂದರೆ ತನ್ನಲ್ಲಿರುವ ಸೂರ್ಯತೇಜಸ್ಸೂ ತಗ್ಗುತ್ತಾ ಬರುವುದು. ಅಲ್ಲದೆ ಓಂಕಾರನಾದವೂ ತಗ್ಗಿ ಕಳಾರೂಪಕ್ಕೆ ತಿರುಗುವುದು. ಇಂತಹ ಕಾಲದಲ್ಲಿ ಬುದ್ಧಿಗೆ ನೋಡುವ ತೇಜಸ್ಸು ಕೇಳುವ ನಾದಗಳಿರುವುದಿಲ್ಲ. ಅಂದರೆ ಜ್ಞಾತೃ, ಜ್ಞಾನಜ್ಞೇಯಗಳಾದ ತ್ರಿಪುಟಿಯಲ್ಲಿ ಜ್ಞೇಯವಾದ ತೇಜಸ್ಸು ಮತ್ತು ನಾದಗಳು ನಶಿಸುವುವು. ಪರಬ್ರಹ್ಮವಾದರೋ ಬುದ್ಧಿಯ ಜ್ಞಾನಕ್ಕೆ ಜ್ಞೇಯರೂಪವಾಗಿ ಸಿಕ್ಕುವುದಿಲ್ಲ. ಇಂತಹ ಸ್ಥಿತಿಯಲ್ಲಿ ಅಧಿಕಾರಿಯು ಮುಂಡಕೋಪನಿಷತ್ತಿನ

**ಪ್ರಣವೋಧನುಶ್ಶರೋಹ್ಯಾತ್ಮಾ ಬ್ರಹ್ಮತಲ್ಲಕ್ಷ್ಯ ಮುಚ್ಯತೇ ।**
**ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ।**

ಎಂಬ ಶ್ರುತಿವಾಕ್ಯದಂತೆ, ಓಂಕಾರೋಚ್ಚಾರಣೆಯನ್ನೇ ಧನುಸ್ಸನ್ನಾಗಿ ಮಾಡಿಕೊಂಡು ಚಿದಾನಂದರೂಪನಾದ ಪರಬ್ರಹ್ಮನಲ್ಲಿ '**ನಾನು**' ಎಂಬ ಜ್ಞಾನದ ಬಾಣವನ್ನು ವಿರಕ್ತಿಯಿಂದಲೂ ಏಕಾಗ್ರತೆಯಿಂದಲೂ ಪ್ರಯೋಗಿಸಬೇಕು. ಅಂದರೆ ಓಂಕಾರೋಚ್ಚಾರಣೆಯ ಅಗ್ರಭಾಗದಲ್ಲಿ ನಿಲ್ಲುವ ಶುದ್ಧವಾದ '**ಅಹಂ**' ಜ್ಞಾನವನ್ನು ಆನಂದರೂಪನಾದ ಪರಬ್ರಹ್ಮನಲ್ಲಿರಲು ಪರಮವೈರಾಗ್ಯದಿಂದಲೂ ದೃಢವಾದ ಜ್ಞಾನದಿಂದಲೂ ಅರ್ಪಿಸಿದರೆ '**ಅಹಂ**' ಜ್ಞಾನವು ತನ್ಮಯವಾಗಿ ಅಭೇದವಾಗುವುದು.

ಧ್ಯಾನಮಾಡುತ್ತಿರುವ ಅಧಿಕಾರಿಯಲ್ಲಿ ಮಧ್ಯಾಹ್ನದ ಸೂರ್ಯನು ಕಿರಣರಹಿತನಾಗಿ ಸಾಯಂಕಾಲದಲ್ಲಿರುವಂತೆ ಅಗ್ನಿರೂಪಕ್ಕೆ ಬಂದಿರುವುದರಿಂದ ಅಧಿಕಾರಿಯು ಉಪನಿಷತ್ತಿನಲ್ಲಿ ಹೇಳುವ "**ಸುವರಿತ್ಯಾದಿತ್ಯೇ**" ಎಂಬುದನ್ನು ದಾಟಿ "**ಮಹ ಇತಿ ಬ್ರಹ್ಮಣಿ**" ಎಂಬುದರ ಸೋಪಾನವನ್ನು ಹತ್ತಲು ಪ್ರಾರಂಭವೆಂಬ ತತ್ವವಾಗಿರುವುದು.

# ೮ನೆಯ ಪ್ರಕರಣ

## ಓಂಕಾರೋಪಾಸನೆಯಲ್ಲಿ ಕಳಾಸೋಪಾನ

೮ನೆಯ ಪ್ರಕರಣದಲ್ಲಿರುವ ವಿಷಯಗಳು:—[ಐದನೇ ಅನುವಾಕದ ಮಂತ್ರದಲ್ಲಿ ಪ್ರಕಾಶಕ್ಕೆಲ್ಲಾ ಪುಷ್ಟಿಯನ್ನು ಕೊಡತಕ್ಕ ಚಂದ್ರನು ಸೂರ್ಯನಿಗಿಂತ ಅಧಿಕನೆಂದು ಹೇಳಿ ಆರನೇ ಅನುವಾಕದಲ್ಲಿ ಚಂದ್ರಸೋಪಾನದ ವಿಚಾರವನ್ನೇ ತಿಳಿಸದೆ ಇರಲು ಕಾರಣವೇನೆಂಬುದನ್ನು ವಿವರಿಸಿದೆ. ಓಂಕಾರೋಪಾಸನೆಯ ಅನುಷ್ಠಾನವನ್ನು ಮಾಡುತ್ತಿದ್ದ ಅಧಿಕಾರಿಯು ಬಿಂದು, ನಾದ, ಕಳೆಗಳಲ್ಲಿ ಬಿಂದು, ನಾದಗಳ ಸೋಪಾನವನ್ನು ದಾಟಿ ಈಗ ಕಳಾಸ್ಥಿತಿಗೆ ಬಂದಿರುತ್ತಾನೆ. ಕಳಾಸೋಪಾನವನ್ನೂ ದಾಟಿ ಓಂಕಾರದ ಸಾಕ್ಷಾತ್ಕಾರವನ್ನು ಹೊಂದಬೇಕು. ಅಂದರೆ 'ಅಹಂ' ಎಂಬ ಶುದ್ಧಜ್ಞಾನವು ಓಂಕಾರ ಸ್ಥಿತಿಯನ್ನು ಪಡೆಯಬೇಕೆಂಬ ವಿಚಾರ.]

ಆರನೇ ಅನುವಾಕದ ಮಂತ್ರದಲ್ಲಿ "**ಭೂರಿತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ । ಸುವರಿತ್ಯಾದಿತ್ಯೇ । ಮಹ ಇತಿ ಬ್ರಹ್ಮಣಿ ।**" ಎಂಬದಾಗಿ ಹೇಳಿರುವುದರಲ್ಲಿ ಅಧಿಕಾರಿಯು ಧ್ಯಾನಾಭ್ಯಾಸದಲ್ಲಿ ಅಗ್ನಿ, ಅನಂತರ ವಾಯು, ತದನಂತರ ಸೂರ್ಯ, ಸೋಪಾನಗಳಲ್ಲಿ ನಿಂತು ಧ್ಯಾನಿಸುವನು. ಸೂರ್ಯ ಸೋಪಾನವಾದ ಅನಂತರ ಪರಬ್ರಹ್ಮ ಸೋಪಾನವನ್ನು ಹತ್ತುವನೆಂತ ಹೇಳಿದೆ.

ಆದರೆ ಐದನೇ ಅನುವಾಕದ "**ಆದಿತ್ಯೇನ ವಾವ ಸರ್ವೇ ಲೋಕಾ ಮಹೀಯನ್ತೇ**" ಎಂಬ ಮಂತ್ರದಲ್ಲಿ ಸೂರ್ಯನಿಂದ ಲೋಕಗಳು ವೃದ್ಧಿಯನ್ನು ಹೊಂದುವುವು ಎಂದು ಹೇಳಿದೆ. ಈ ಮಂತ್ರದ ಮುಂದಿನ ಮಂತ್ರದಲ್ಲೇ "ಚಂದ್ರಮಸಾ ವಾವ ಸರ್ವಾಣಿಜ್ಯೋತೀಗ್ಂಷಿ ಮಹೀಯನ್ತೇ" ಅಂದರೆ ಚಂದ್ರನಿಂದ ಜ್ಯೋತಿಯಂದರೆ ಪ್ರಕಾಶಗಳೇ ವೃದ್ಧಿಹೊಂದುವುದೆಂದು ಹೇಳಿದೆ. ಅಂದರೆ ಐದನೇ ಅನುವಾಕದ ಮಂತ್ರಗಳಿಂದ ಪ್ರಕಾಶಕ್ಕೆಲ್ಲಾ ಮಹತ್ತನ್ನು ಕೊಡುವವನಾದುದರಿಂದ ಸೂರ್ಯನಿಗಿಂತಲೂ, ಶ್ರೇಷ್ಠನೆಂದು ಆಯಿತು. ಆದುದರಿಂದ ಸೂರ್ಯಸೋಪಾನಕ್ಕಿಂತ ಚಂದ್ರನ ಸೋಪಾನವು ಶ್ರೇಷ್ಠವೆಂದು ವ್ಯಕ್ತವಾಗುವುದು.

ಅನುಷ್ಠಾನದ ಅನುಭವದ ವಿಚಾರಗಳನ್ನೇ ತಿಳಿಸುವ ಆರನೇ ಅನುವಾಕದ ಮಂತ್ರದಲ್ಲಿ ಚಂದ್ರನ ಸೋಪಾನದ ವಿಚಾರವನ್ನು ಏತಕ್ಕೆ ತಿಳಿಸಲಿಲ್ಲ ಮತ್ತು ಐದನೇ

ಅನುವಾಕದಲ್ಲಿ ಪ್ರಕಾಶಕ್ಕೆಲ್ಲಾ ಪುಷ್ಟಿಯನ್ನು ಕೊಡುವ ಚಂದ್ರನಿಗೆ "ಮಹ ಇತಿ ಚಂದ್ರಮಾಃ" ಎಂದು ಹೇಳಿ ಪರಬ್ರಹ್ಮಸ್ಥಾನವನ್ನು ಕೊಟ್ಟಿರುವುದು ವ್ಯರ್ಥವಾಗುವುದಿಲ್ಲವೆ ಎಂಬ ಅನುಮಾನವು ವಿಮರ್ಶಾತ್ಮಕ ಪಾಠಕರಿಗೆ ಬರಬಹುದು. ಉಪನಿಷತ್ತಿನಲ್ಲಿ ಅಸಮಂಜಸವಾಗಿ ಹೇಳುವುದಿಲ್ಲ. ಚಂದ್ರನ ಸೋಪಾನಕ್ಕೂ ಮಹತ್ತು ಇದ್ದೇ ಇದೆ. ಸೂರ್ಯಸೋಪಾನದಿಂದ ಚಂದ್ರಸೋಪಾನಕ್ಕೆ ಹತ್ತಿ ಅನಂತರವೇ ಪರಬ್ರಹ್ಮ ಸೋಪಾನವನ್ನು ಹೊಂದಬೇಕು. ಆದರೆ ಆರನೇ ಅನುವಾಕದಲ್ಲಿ ಅಗ್ನಿಯಲ್ಲಿ ನಿಲ್ಲುವನು, ವಾಯುವಿನಲ್ಲಿ ನಿಲ್ಲುವನು, ಸೂರ್ಯನಲ್ಲಿ ನಿಲ್ಲುವನು ಎಂದು ಹೇಳಿರುವಂತೆ ಸಮಾಧಿಯ ಅಭ್ಯಾಸ ಮಾಡತಕ್ಕ ಅಧಿಕಾರಿಯು ಸೂರ್ಯಸೋಪಾನವನ್ನು ದಾಟಿದನಂತರ ಚಂದ್ರಸೋಪಾನದ ಮೂಲಕ ಪರಬ್ರಹ್ಮ ಸೋಪಾನವನ್ನು ಹೊಂದುವನು. ಆದರೆ ಚಂದ್ರಸೋಪಾನದಲ್ಲಿ ನಿಲ್ಲಲು ಸಾಧ್ಯವಿಲ್ಲ. ಅನುಷ್ಠಾನದಲ್ಲಿ ಚಂದ್ರಸೋಪಾನದಲ್ಲಿ ನಿಲ್ಲಲು ಸಾಧ್ಯವಿಲ್ಲದುದರಿಂದ ಆರನೇ ಅನುವಾಕದ ಮಂತ್ರದಲ್ಲಿ ಚಂದ್ರನ ವಿಚಾರವು ಬಂದಿಲ್ಲ. ಇದು ಹೇಗೆಂಬುದನ್ನು ತಕ್ಕಮಟ್ಟಿಗೆ ತಿಳಿಸೋಣ.

ತಮೋಗುಣ, ರಜೋಗುಣ, ಮಲಿನ ಸತ್ವಗುಣ ಈ ಮೂರೂ ಸೇರಿ ಮಲಿನ ಮಾಯಾ ಅಥವಾ ಅವಿದ್ಯೆಯೆಂದು ಕರೆಯಲ್ಪಡುವುದು. ಶುದ್ಧಸತ್ವಗುಣವು ಶುದ್ಧಸತ್ವಮಾಯಾ ಅಥವಾ ವಿದ್ಯೆಯೆಂದು ಕರೆಯಲ್ಪಡುವುದು. ಓಂಕಾರ ವರ್ಣೋಚ್ಚಾರಣೆಯಿಂದ ಧ್ಯಾನಪ್ರಾರಂಭದಿಂದ ಅನಾಹತಚಕ್ರಭೇದನೆಯಾಗಿ ಮಧ್ಯಾಹ್ನದ ಸೂರ್ಯನ ಪೂರ್ಣ ತೇಜೋರೂಪಿನಲ್ಲಿ ಧ್ಯಾನಮಾಡುವ ಸೋಪಾನಕ್ಕೆ ಬಂದಾಗ ಜೀವಾತ್ಮನಿಗೆ ಇದ್ದ ತಮೋಗುಣದ ಉಪಾಧಿಯು ನಿವೃತ್ತಿಯಾಗುವುದು. ಮಧ್ಯಾಹ್ನದ ಸೂರ್ಯನು ಕಿರಣರಹಿತನಾಗಿ ಸಾಯಂಕಾಲದ ತತ್ವಕ್ಕೆ ಪುನಃ ಅಗ್ನಿರೂಪಕ್ಕೆ ಬಂದು, ಮತ್ತು ಓಂಕಾರನಾದವೂ ಅಡಗುವ ಸೋಪಾನಕ್ಕೆ ಈಗ ಅಧಿಕಾರಿಯು ಬಂದಿರುವುದರಿಂದ ಜೀವಾತ್ಮನಿಗೆ ಇದ್ದ ರಜೋಗುಣದ ಉಪಾಧಿಯು ನಿವೃತ್ತಿಯಾಗಿರುವುದು. ಅಂದರೆ ಅವಿದ್ಯಾ ಉಪಾಧಿಯು ನಿವೃತ್ತಿಯಾಗುವುದು. ಬಂಧಕವಲ್ಲದೇ ಇದ್ದರೂ ವಿದ್ಯಾ ಉಪಾಧಿಯೆಂದರೆ ಶುದ್ಧ ಸತ್ವಗುಣದ ಉಪಾಧಿಯು ಜೀವಾತ್ಮನಿಗೆ ಉಳಿದುಕೊಂಡಿರುವುದು. ಶುದ್ಧಸತ್ವಗುಣದ ಈ ಉಪಾಧಿಯೂ ನಿವೃತ್ತಿಯಾದಾಗ ಪರಬ್ರಹ್ಮತ್ವ ಪ್ರಾಪ್ತಿಯಾಗುವುದು. ಶುದ್ಧಸತ್ವಗುಣದ ಸೋಪಾನ ಹೇಗಿರುವುದೆಂದರೆ ಶ್ರೀಶಂಕರಭಗವತ್ಪಾದಾಚಾರ್ಯರವರು ವಿವೇಕ ಚೂಡಾಮಣಿಯಲ್ಲಿ

**ವಿಶುದ್ಧ ಸತ್ವಸ್ಯ ಗುಣಾಃ ಪ್ರಸಾದಃ ।**
**ಸ್ವಾತ್ಮಾನುಭೂತಿಃ ಪರಮ ಪ್ರಶಾನ್ತಿಃ ॥**
**ತೃಪ್ತಿಃ ಪ್ರಹರ್ಷಃ ಪರಮಾತ್ಮನಿಷ್ಠಾ ।**
**ಯಯಾ ಸದಾನಂದರಸಃ ಸಮೃಚ್ಛತಿ ॥**

**ತಾತ್ಪರ್ಯ—** ಅಂತಃಕರಣ ಪರಿಶುದ್ಧವಾಗೋಣವು, ಸ್ವಾತ್ಮಾನುಭವವು ಅತ್ಯುತ್ತಮವಾದ ಶಾಂತಿಯೆಂದರೆ—ಅಂತರಿಂದ್ರಿಯ ಬಹಿರಿಂದ್ರಿಯಗಳ ವಿಕಾರಗಳು ಲೇಶವೂ ಇಲ್ಲದಿರೋಣವು, ಸರ್ವಸುಖವೂ ದೊರತಂತೆ ಇರೋಣವು, ಮನೋಲ್ಲಾಸವೂ, ಆತ್ಮನಿಷ್ಠೆಯಿಂದ ಆನಂದಮಯವಾಗಿರುವಿಕೆಗಳ ಸ್ಥಿತಿಯೇ ಶುದ್ಧ ಸತ್ವಗುಣದ ಸೋಪಾನ.

ಇದುವರೆಗೂ ಧ್ಯಾನಾಭ್ಯಾಸದಲ್ಲಿ ಜ್ಞಾತೃ, ಜ್ಞಾನ, ಜ್ಞೇಯಗಳೆಂಬ ತ್ರಿಪುಟಿಯು ಇತ್ತು. ರಜೋಗುಣದ ಉಪಾಧಿಯು ನಿವೃತ್ತಿಯಾಗುವುದೆಂದರೆ ವಿಷಯ ವ್ಯವಹಾರಕ್ಕೆ ಕಾರಣವಾದ ಜ್ಞಾನ, ಜ್ಞೇಯಗಳೆರಡೂ ನಶಿಸುವುವು. ಜ್ಞಾನ, ಜ್ಞೇಯಗಳೆರಡೂ ನಶಿಸಿರುವುದರಿಂದ ಜ್ಞಾತೃವೆಂದರೆ ಶುದ್ಧವಾದ 'ಅಹಂ' ಎಂಬ ಜ್ಞಾನ ಮಾತ್ರ ಉಳಿದುಕೊಳ್ಳುವುದು. ಶುದ್ಧವಾದ 'ಅಹಂ' ಜ್ಞಾನ ಮಾತ್ರ ಉಳಿದುಕೊಳ್ಳುವ ಈ ಸ್ಥಿತಿಯೇ ಬಿಂದು ನಾದ ಕಳೆಗಳಲ್ಲಿ ಕಳಾಸ್ಥಾನ. ಈ ಸೋಪಾನವೇ ಈಶ್ವರ ಸೋಪಾನವಾಗಿಯೂ, ಪರಾಶಕ್ತಿ ಸೋಪಾನವಾಗಿಯೂ, ವಿದ್ಯಾ ಸೋಪಾನವಾಗಿಯೂ, ಶುದ್ಧ ಸತ್ವಗುಣದ ಸೋಪಾನವಾಗಿಯೂ ಇರುವುದು. ಈ ಸೋಪಾನದಲ್ಲಿ ಶುದ್ಧವಾದ 'ಅಹಂ' ಜ್ಞಾನವು ದೇಹ ಮತ್ತು ಹೊರಗಿನ ಜ್ಞಾನವಿಲ್ಲದೆ ಮೇಲಿನ ಶ್ಲೋಕದಲ್ಲಿ ಹೇಳಿರುವಂತೆ ಸ್ವಾತ್ಮಾನುಭವದ ಆನಂದಮಯವಾಗಿ ಉನ್ಮನೀ ಸ್ಥಿತಿಯಲ್ಲಿ ಇರುವುದು. ತ್ರಿಪುಟಿಯಿಲ್ಲದ ಆನಂದಮಯವಾಗಿರುವ 'ಅಹಂ' ಜ್ಞಾನ ಮಾತ್ರ ಉಳಿದಿರುವ ಈ ಸ್ಥಿತಿಯಲ್ಲಿ ವ್ಯವಹಾರಕ್ಕೆ ಅವಕಾಶವಿಲ್ಲದಿರುವುದರಿಂದ ಅಧಿಕಾರಿಯು ಈ ಸಮಾಧಿಯ ಸೋಪಾನದಲ್ಲಿ ನೆಲೆಸಲಾರನು. ಈ ಸೋಪಾನದಲ್ಲಿ ನೆಲೆಸಿರಲು ಸಾಧ್ಯವಿಲ್ಲದೇ ಇದ್ದರೂ, ಈ ಸೋಪಾನದ ದಾರಿಯ ಮೂಲಕ ಪರಬ್ರಹ್ಮತ್ವವನ್ನು ಹೊಂದುವನು. ಆದುದರಿಂದ ಐದನೇ ಅನುವಾಕದ ಮಂತ್ರದಲ್ಲಿ ಚಂದ್ರನ ಸೋಪಾನದ ವಿಚಾರವನ್ನು ತಿಳಿಸಿದ್ದರೂ ಆರನೇ ಅನುವಾಕದ ಮಂತ್ರದಲ್ಲಿ ಚಂದ್ರನ ಸೋಪಾನದ ವಿಚಾರವನ್ನು ಈ ಮೇಲಿನ ಕಾರಣದಿಂದ ತಿಳಿಸಿಲ್ಲ. ಈ ಮೇಲಿನ ತತ್ವಗಳನ್ನು ಕೆಳಗಿನ ಮಂಡಲಬ್ರಾಹ್ಮಣೋಪನಿಷತ್ತಿನ ವಾಕ್ಯವೂ ಸಮರ್ಥಿಸುವುದು.

**"ಶಬ್ದಕಾಲಲಯೇನ ದಿವಾರಾತ್ರ್ಯತೀತೋ ಭೂತ್ವಾ ಸರ್ವಪರಿಪೂರ್ಣ ಜ್ಞಾನೇನೋನ್ಮನ್ಯವಸ್ಥಾ ವಶೇನ ಬ್ರಹ್ಮೈಕ್ಯಂ ಭವತಿ" ।**

ಅಂದರೆ ಓಂಕಾರನಾದಾನುಷ್ಠಾನದ ಕಾಲವು ನಶಿಸುವುದರಿಂದ ದಿವಾ ಎಂದರೆ ರಜೋಗುಣ ರಾತ್ರಿಯೆಂದರೆ ತಮೋಗುಣಗಳ ಉಪಾಧಿಗಳನ್ನು ದಾಟಿ ಸರ್ವಪರಿಪೂರ್ಣಜ್ಞಾನವೆಂದರೆ ಅಖಂಡಾಕಾರವಾದ 'ಅಹಂ' ಜ್ಞಾನವಾದ ಉನ್ಮನ್ಯವಸ್ಥೆಯ ಸ್ವಾಧೀನದಿಂದ 'ಅಹಂ' ಜ್ಞಾನವು ಪರಬ್ರಹ್ಮನಲ್ಲಿ ಐಕ್ಯಗೊಳ್ಳುವುದು.

ಜಾಗ್ರತ್ಸ್ವಪ್ನ ಸುಷುಪ್ತಿಗಳ ಉಪಾಧಿಗಳನ್ನು ಅನುಸರಿಸಿ ವಿಶ್ವತೈಜಸ, ಪ್ರಾಜ್ಞನೆಂದು ಜೀವಾತ್ಮನು ಕರೆಯಲ್ಪಡುವನಷ್ಟೆ. ಓಂಕಾರೋಚ್ಚಾರಣೆಯ ಧ್ಯಾನಾನುಷ್ಠಾನದಲ್ಲಿ ಬುದ್ಧಿವೃತ್ತಿಯು ಮೂಲಾಧಾರಚಕ್ರದಿಂದ ಸುಷುಮ್ನಾನಾಡಿಯೊಳಗಿನ ಮಾರ್ಗದಲ್ಲಿ ಅನಾಹತಚಕ್ರಕ್ಕೆ ಹತ್ತಿದರೆ ಜೀವಾತ್ಮನಿಗೆ ಇದ್ದ ವಿಶ್ವತ್ವದ ಉಪಾಧಿಯು ನಿವೃತ್ತಿಯಾಗುವುದು. ಸುಷುಮ್ನಾನಾಡಿಯೊಳಗೇ ಅನಾಹತಚಕ್ರದಿಂದ ಮೇಲಕ್ಕೆ ಹತ್ತಿ ಆಜ್ಞಾಚಕ್ರವನ್ನು ಸೇರಿದರೆ ಜೀವಾತ್ಮನಿಗೆ ಇದ್ದ ತೈಜಸತ್ವದ ಉಪಾಧಿಯು ನಿವೃತ್ತಿ ಯಾಗುವುದು. ಆಜ್ಞಾಚಕ್ರದಿಂದ ಸಹಸ್ರಾರ ಕಮಲವೆಂದರೆ ಹೃದಯಾಕಾಶವನ್ನು ಸೇರಿದರೆ ಪ್ರಾಜ್ಞತ್ವದ ಉಪಾಧಿಯೂ ನಿವೃತ್ತಿಯಾಗಿ, ಜೀವಾತ್ಮನಿಗೆ ತುರೀಯತ್ವವು ಪ್ರಾಪ್ತವಾಗುವುದು. ಸಮಾಧಿಯ ಅಭ್ಯಾಸಮಾಡುತ್ತಿದ್ದ ಅಧಿಕಾರಿಯು ಈಗ ಕಳಾಸೋಪಾದದಲ್ಲಿರುತ್ತಾನೆಂದರೆ ಈಶ್ವರ ಸ್ಥಾನವಾದ ಆಜ್ಞಾಚಕ್ರದಲ್ಲಿರುವುದರಿಂದ ಇನ್ನೂ ಪ್ರಾಜ್ಞತ್ವದ ಉಪಾಧಿಯು ನಿವೃತ್ತಿಯಾಗಿಲ್ಲ. ಪ್ರಾಜ್ಞತ್ವದ ಸ್ಥಿತಿಯು ಆನಂದಮಯವಾಗಿ ಶುದ್ಧವಾದ '**ಅಹಂ**' ಜ್ಞಾನ ಮಾತ್ರವಾಗಿರುತ್ತೆ.

ಮಾಂಡುಕ್ಯೋಪನಿಷತ್ತಿನಲ್ಲಿ '**ಓಂ**' ಕಾರದಲ್ಲಿನ "**ಮ**" ಕಾರವಾದ ಪ್ರಾಜ್ಞತ್ವದ ಸೋಪಾನವು ಅಳಿಯುವ ಕಾರ್ಯವುಳ್ಳದ್ದೆಂದು ಹೇಳಿರುತ್ತದೆ. ಅಂದರೆ '**ಅಹಂ**' ಎಂಬ ಜ್ಞಾನವು ಈ ಸೋಪಾನದಿಂದ ಮೋಕ್ಷದಲ್ಲಿ ಪರಬ್ರಹ್ಮ ಸೋಪಾನಕ್ಕೆ ಪ್ರವೇಶಿಸುವುದು. ಪರಬ್ರಹ್ಮ ಸೋಪಾನದಿಂದ '**ಅಹಂ**' ಜ್ಞಾನವು ಪ್ರಾಜ್ಞತ್ವದ ಸೋಪಾನಕ್ಕೆ ಉದಯಿಸಿದಾಗ ಪ್ರಾಜ್ಞತ್ವದ ಸೋಪಾನವು ಈ **ಅಹಂ** ಜ್ಞಾನವನ್ನು ದೇಹ ವ್ಯಾಪಾರಕ್ಕೆ ಪ್ರಕಾಶವಾಗಿರಲು ಕೆಳಕ್ಕೆ ತಳ್ಳುವುದು. ಆದುದರಿಂದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಳಿಯುವ ಸ್ವಭಾವವಾದದ್ದು ಪ್ರಾಜ್ಞನ ಸೋಪಾನವೆಂದರೆ ಕಳಾಸೋಪಾನ. ಕಳೆಯು ನಿಶ್ಶಬ್ದ ಮತ್ತು ನಿಷ್ಕಲವಾದ ಪರಬ್ರಹ್ಮ ಸ್ಥಿತಿಯನ್ನು ಹೊಂದುತ್ತದೆ. ನಿಶ್ಶಬ್ದದಿಂದ ಪುನಃ ಉದಯಿಸಿ ಕಳೆಯೆನಿಸಿ ಅನಂತರ ಓಂಕಾರ ನಾದ ವೆನಿಸುವುದು. ಆದುದರಿಂದ ಕಳೆಯು ಅಳಿಯುವ ಸ್ಥಾನ. ಶ್ರೀ ಶಂಕರಭಗವತ್ಪಾದಾಚಾರ್ಯರವರು ಈ ಅನುವಾಕದ "**ಸೇಂದ್ರಯೋನಿಃ**" ಎಂಬ ಮಂತ್ರದ ಭಾಷ್ಯದಲ್ಲಿ ತಾಲುಮೂಲ ಸ್ಥಳವಾದ ಸುಷುಮ್ನಾನಾಡಿಯ ಮೇಲಿನ ತುದಿಯ ಸ್ಥಳವು ಪರಬ್ರಹ್ಮತ್ವವನ್ನು ಹೊಂದಲು ಬಾಗಿಲು ಎಂದು ಹೇಳಿರುವುದೂ ಮೇಲಿನ ಕಳಾತತ್ವಕ್ಕೆ ಸೇರಿದ್ದಾಗಿದೆ.

ಮೂಲಾಧಾರಚಕ್ರದಲ್ಲಿರುವ '**ಓಂ**' ಕಾರದಲ್ಲಿನ "**ಅ**" ಕಾರವು ಅನಾಹತಚಕ್ರದಲ್ಲಿರುವ "**ಉ**" ಕಾರವನ್ನು ಸೇರಿ "**ಓ**" ಕಾರವಾಗುವುದು. ಈ "**ಓ**" ಕಾರವು ಆಜ್ಞಾಚಕ್ರದಲ್ಲಿರುವ "**ಮ**" ಕಾರವನ್ನು ಸೇರಿ "**ಓಮ**" ಆಗುವುದು. "**ಓಮ**" ಜೊತೆಗೆ ಅನುಸ್ವಾರ (ಬಿಂದು) ಸೇರಿದರೇ "**ಓಂ**" ಕಾರವಾಗುವುದು. ಹೀಗೆ ಬಿಂದುವು

ಸೇರಿ ಓಂಕಾರಕ್ಕೆ ಪ್ರಾರಂಭವಾಗುವ ಸ್ಥಳವೇ ಅರ್ಧಮಾತ್ರಾವೆನಿಸುವ ಕಳಾ ಸೋಪಾನ. ಇದನ್ನು ಕೆಳಗಿನ ಬ್ರಹ್ಮವಿದ್ಯೋಪನಿಷತ್ತಿನ ವಾಕ್ಯವು ಸಮರ್ಥಿಸುವುದು.

**"ಅರ್ಧಮಾತ್ರಾ ಪರಾಜ್ಞೇಯಾ ತತ ಊರ್ಧ್ವಂ ಪರಾತ್ಪರಂ |"**

ಅಧಿಕಾರಿಯ ಅನುಷ್ಠಾನದ ಈ ಸೋಪಾನದಲ್ಲಿ ಮಧ್ಯಾಹ್ನದ ಸೂರ್ಯನು ಸಾಯಂ ಕಾಲಕ್ಕೆ ಕಿರಣರಹಿತನಾಗಿ ಪುನಃ ಅಗ್ನಿಯರೂಪಕ್ಕೆ ಬರುವನೆಂದು ಹಿಂದೆ ತಿಳಿಸಿರುತ್ತಷ್ಟೆ! ಚಂದ್ರನು ಈ ಅಗ್ನಿಯನ್ನು ತನ್ನಲ್ಲಿ ಅಡಗಿಸಿಕೊಂಡು ಈ ಕಳಾಸ್ಥಿತಿಯಲ್ಲಿ ಅಮೃತ ಕಿರಣಗಳುಳ್ಳ ಆನಂದಕರವಾದ ಬೆಳದಿಂಗಳ ರೂಪವಾದ ಪ್ರಕಾಶದವನಾಗಿರುತ್ತಾನೆ. ಈ ಪ್ರಕಾಶದ ಸ್ಥಿತಿಯನ್ನು ಉಪನಿಷತ್ತಿನಲ್ಲಿ**"ಆರ್ದ್ರಂ ಜ್ವಲತಿ ಜ್ಯೋತಿ ರಹಮಸ್ಮಿ"** ಎಂಬುದಾಗಿ ವರ್ಣಿಸಿದೆ. ಪರಾಶಕ್ತಿಯ ಅಭಿವ್ಯಕ್ತವು ಚಂಪ್ರಸಲ್ಲಾದುದರಿಂದ ಈ ಸೋಪಾನವು ಪರಾಶಕ್ತಿಸೋಪಾನವಾಗಿದೆ. ಈ ಕಳಾಸೋಪಾನದಲ್ಲಿ ಕಾರ್ಯಕಾರಣ ಭಾವಗಳು ಇಲ್ಲದಿರುವುದರಿಂದ ಅಧಿಕಾರಿಯು ಅನುಷ್ಠಾನದ ಈ ಸೋಪಾನದಲ್ಲಿ ನೆಲಸಲು ಯತ್ನವಿಲ್ಲದಿರುವುದರಿಂದ ಆರನೇ ಅನುವಾಕದ ಮಂತ್ರದಲ್ಲಿ ಈ ಸೋಪಾನದ ವಿಚಾರವು ಗೂಢವಾಗಿದೆ. ಈ ಸೋಪಾನವು ಬಾಗಿಲು ರೂಪದಲ್ಲಿದ್ದು ಈ ಮೂಲಕ ಪರಬ್ರಹ್ಮತ್ವವನ್ನು ಪಡೆಯಬೇಕಾಗಿರುವುದರಿಂದಲೂ, ಐದನೇ ಅನುವಾಕದ ಮಂತ್ರದಲ್ಲಿ ಈ ಸೋಪಾನದ ಮಹತ್ವವನ್ನು ತಿಳಿಸಿರುವುದರಿಂದಲೂ ವಿಚಾರವನ್ನು ಇಲ್ಲಿ ಬರೆಯಲ್ಪಟ್ಟಿದೆ.

# ೯ನೇ ಪ್ರಕರಣ

## ಓಂಕಾರ ಸ್ವರೂಪವಾದ ಪರಬ್ರಹ್ಮ ಸಾಕ್ಷಾತ್ಕಾರ

೯ನೇ ಪ್ರಕರಣದಲ್ಲಿರುವ ವಿಷಯಗಳು; — ["ಅಹಂ" ಎಂಬ ಜ್ಞಾನವು ಕಳಾ ಸೋಪಾನವನ್ನು ದಾಟಿ ಓಂಕಾರ ಸಾಕ್ಷಾತ್ಕಾರವೆನಿಸುವ ಪರಬ್ರಹ್ಮವೇ ಆಗುವ ವಿಚಾರ. ಓಂಕಾರ ಸಾಕ್ಷಾತ್ಕಾರ ಸೋಪಾನದ ಮಹಿಮೆ. ವ್ಯಾಹೃತಿಗಳ ಉಪಾಸನೆಯೆಂಬುದರ ವಿವರಣೆ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳಾದ ಪಂಚಕೋಶಗಳ ಉಪಾಧಿಗಳನ್ನೂ ದಾಟಿ ಆನಂದ ರೂಪವಾದ ಪರಬ್ರಹ್ಮ

ಸಾಕ್ಷಾತ್ಕಾರವನ್ನು ಹೊಂದುವಿಕೆಯೂ, ವಿಶ್ವ, ತೈಜಸ, ಪ್ರಾಜ್ಞತ್ವದ ಸೋಪಾನವನ್ನು ದಾಟಿ ತುರೀಯವೆನಿಸುವ ಪರಬ್ರಹ್ಮ ಸಾಕ್ಷಾತ್ಕಾರವನ್ನು ಪಡೆಯುವಿಕೆಯೂ, ಬಿಂದು, ನಾದ, ಕಳಾ ಸೋಪಾನಗಳನ್ನು ದಾಟಿ ಓಂಕಾರ ಸಾಕ್ಷಾತ್ಕಾರವಾಗುವಿಕೆಯೂ ಏಕತತ್ತ್ವಾರ್ಥಗಳುಳ್ಳವುಗಳಾಗಿ ಜ್ಞಾನನಾಡಿಯಾದ ಸುಷುಮ್ನಾ ಮಾರ್ಗದ ಅನುಷ್ಠಾನಕ್ಕೆ ಸೇರಿದವುಗಳಾಗಿ ಒಂದೇ ಫಲಗಳುಳ್ಳದ್ದಾಗಿ ಇರುವುವು ಎಂಬ ವಿಚಾರ.]

ಆರನೇ ಅನುವಾಕದ **"ಸುವರಿತ್ಯಾದಿತ್ಯೇ"** ಎಂಬ ಮಂತ್ರದ ತತ್ತ್ವವನ್ನು ಇದು ವರಿಗೂ ವಿವರಿಸಿತು. **"ಸುವರಿತ್ಯಾದಿತ್ಯೇ"** ಎಂಬ ಮಂತ್ರದ ಮುಂದಿನ ಮಂತ್ರವಾದ **"ಮಹ ಇತಿ ಬ್ರಹ್ಮಣಿ"** ಎಂಬುದರ ವಿಚಾರವನ್ನು .ವಿವರಿಸೋಣ. **"ಮಹ ಇತಿ ಬ್ರಹ್ಮಣಿ"** ಅಂದರೆ ಮಹಃ ಎಂಬ ನಾಲಕ್ಕನೆಯ ವ್ಯಾಹೃತಿ ರೂಪವಾದ ಎಲ್ಲಕ್ಕೂ ಆಶ್ರಯವಾಗಿರುವ ಪರಬ್ರಹ್ಮದಲ್ಲಿ ನಿಲ್ಲುವನು ಎಂದು ಅರ್ಥ. ಪರಬ್ರಹ್ಮನಲ್ಲಿ ಪ್ರವೇಶಿಸುವುದು ಯಾವುವೆಂದರೆ **"ಅಹಂ"** (ನಾನು) ಎಂಬ ಜ್ಞಾನ. ಕಳಾ ಸೋಪಾನದ ಸಮಾಧಿಯ ಸ್ಥಿತಿಯಲ್ಲಿ ಅಖಂಡಾಕಾರವಾಗಿ ಆನಂದಮಯವಾಗಿ **'ಅಹಂ'** ಜ್ಞಾನವು ಇರುವುದೆಂದು ಹಿಂದೆ ತಿಳಿಸಿರುತ್ತಷ್ಟೆ. ಪಂಚಪ್ರಾಣ, ಇಂದ್ರಿಯಗಳ ಶಕ್ತಿಗಳು, ಚಕ್ರಗಳಲ್ಲಿರುವ ಅಕ್ಷರ ಶಕ್ತಿಗಳು, ಬುದ್ಧಿ ಮನಸ್ಸಿನ ಶಕ್ತಿಗಳು, ರಜೋಗುಣ, ತಮೋಗುಣ ಈ ಎಲ್ಲಾ ಶಕ್ತಿಗಳನ್ನೂ ದೇಹದ ಕಾರ್ಯ ಮಾಡದಂತೆ ಈ **"ಅಹಂ"** ಜ್ಞಾನಶಕ್ತಿಯು ತನ್ನಲ್ಲಿ ಅಡಗಿಸಿಕೊಂಡು ಕಳಾರೂಪದಲ್ಲಿ ನೆಲೆಸಿರುವುದು.

ಕಳಾರೂಪದಿಂದ ಪರಬ್ರಹ್ಮಸ್ಥಿತಿಯನ್ನು ಪಡೆಯಲು ಸಮಾಧಿಯ ಅಭ್ಯಾಸದಲ್ಲಿ ಅಧಿಕಾರಿಯು ಮುಂದುವರೆದಾಗ, **'ಅಹಂ'** ಜ್ಞಾನಶಕ್ತಿಯು ಕ್ರಿಯಾಶಕ್ತಿ ಸ್ವರೂಪವಾದ ವಿಸರ್ಗಾ (ಅಃ) ಕ್ಷರ ಶಕ್ತಿಯನ್ನು ಅಭೇದದಿಂದ ತನ್ನಲ್ಲಿರಲು ಅಡಗಿಸಿಕೊಂಡು ತಾನು "ಅಂ" ರೂಪವನ್ನು ಹೊಂದುವುದು. ಅನಂತರ "ಅ" ಅಕ್ಷರವನ್ನೂ ಅಡಗಿಸಿಕೊಂಡು **ಅನುಸ್ವಾರದ (೦)** ಉಚ್ಚಾರಣೆಯ ಬಹು ಸೂಕ್ಷ್ಮದ ತತ್ವಕ್ಕೆ ಬಂದು, ನಂತರ ಚಲನೆಯೂ ನಿಂತು, ಬಿಂದುವು ಸೂಕ್ಷ್ಮವಾದ ಶಕ್ತಿರೂಪವಾಗಿ ಪರಬ್ರಹ್ಮದಲ್ಲಿ ಅಭೇದವಾಗಿ ಅಡಗುವುದು. ಅಂದರೆ **'ಅಹಂ'** ಜ್ಞಾನಶಕ್ತಿಯು **"ನಿಶ್ಶಬ್ದಂ ಬ್ರಹ್ಮ ಉಚ್ಯತೆ"** ಎಂಬ ಶ್ರುತಿವಚನಾನುಸಾರ ಅಣುವಿಗೆ ಅಣುವಾಗಿರುವ ಬಿಂದುರೂಪದ ಶಕ್ತಿಯಾಗಿ ಪರಬ್ರಹ್ಮನಲ್ಲಿ ಅಭೇದವಾಗಿರುವುದು. ಅಣುವಿಗೆ ಅಣುವಾಗಿರುವ ಈ ಶಕ್ತಿಯು ಸೃಷ್ಟಿಕ್ರಮವನ್ನು ಅನುಸರಿಸಿ **"ಮಹತೋ ಮಹೀಯಾನ್"** ಎಂಬ ಶ್ರುತಿವಚನಾನುಸಾರ ಮಹತ್ತಾದ ಜಗದ್ರೂಪವಾಗುವುದು. **"ಅಹಂ"** ರೂಪವಾದ ಪರಾಶಕ್ತಿಯು ದೇಹದ ಸಕಲ ವ್ಯಾಪಾರದ ಶಕ್ತಿಗಳನ್ನು ತನ್ನಲ್ಲಿ ಅಡಗಿಸಿಕೊಂಡು

ಪರಬ್ರಹ್ಮ ಸ್ವರೂಪವಾಗುವುದೆಂದು ಮೇಲೆತಿಳಿಸಿತಷ್ಟೆ. ಈ ತತ್ವವನ್ನು ಕೆಳಗಿನ ಶ್ರೀ ಶಂಕರಭಗವತ್ಪಾದಾಚಾರ್ಯರವರು ಸೌಂದರ್ಯ ಲಹರಿಯಲ್ಲಿ ಹೇಳಿರುವ ವಾಕ್ಯ ಸಮರ್ಥಿಸುವುದು.

**ಮಹೀಂ ಮೂಲಾಧಾರೇ ಕಮಪಿ ಮಣಿಪೂರೇ ಹುತವಹಂ ।**
**ಸ್ಥಿತಂ ಸ್ವಾಧಿಷ್ಠಾನೇ ಹೃದಿಮರುತ ಮಾಕಾಶ ಮುಪರಿ ॥**
**ಮನೋಽಪಿ ಭ್ರೂಮಧ್ಯೇ ಸಕಲಮಪಿ ಭಿತ್ವಾಕುಲ ಪಥಂ ।**
**ಸಹಸ್ರಾರೇ ಪದ್ಮೇ ಸಹರಹಸಿ ಪತ್ಯಾ ವಿಹರಸೇ ॥**

ಮಾತೆಯೆ ! ನೀನು ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ, ಆಜ್ಞಾ ಚಕ್ರಗಳೆಂಬ ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ ಮತ್ತು ಅಂತಃಕರಣದ ತತ್ವಗಳನ್ನೆಲ್ಲಾ ಅತಿಕ್ರಮಿಸುವಂತೆ ಸುಷುಮ್ನಾ ಮಾರ್ಗವನ್ನು ಭೇದಿಸಿಕೊಂಡು ಸಹಸ್ರಾರಕಮಲದಲ್ಲಿ ಪರಬ್ರಹ್ಮನೊಂದಿಗೆ ಅಭೇದವಾಗಿರುವೆ ಎಂದು ಹೇಳಿರುವರು. ಮೇಲೆ ವಿವರಿಸಿರುವಂತೆ ಇದೇ ಪರಬ್ರಹ್ಮವೆಂದರೆ ಓಂಕಾರ ಸ್ವರೂಪ. ಕೆಳಗಿನ ಮಾಂಡೂಕ್ಯೋಪನಿಷತ್ತಿನ ವಾಕ್ಯವು ಮೇಲಿನ ತತ್ವಗಳನ್ನು ಸಮರ್ಥಿಸುವುದು.

**"ಅಮಾತ್ರಶ್ಚತುರ್ಥೋಽವ್ಯವಹಾರಃ ಪ್ರಪಂಚೋಪಶಮ**
**ಶಿವೋಽದ್ವೈತ ಏವ ಮೋಂಕಾರಃ" ।**

ತುರೀಯನು, ಅಕಾರ ಉಕಾರ ಮಕಾರ ಮಾತ್ರೆಗಳಿಲ್ಲದವನು, ವ್ಯವಹಾರಕ್ಕೆ ನಿಲುಕದ ಪ್ರಪಂಚವಿಲ್ಲದ ಶಿವನು, ಆತ್ಮನೇ ಓಂಕಾರವು.

ನಾನು ಎಂಬ ಜ್ಞಾನವು ಆನಂದ ರೂಪವಾದ ಪರಬ್ರಹ್ಮವಾಗುವಿಕೆಯನ್ನೇ ಶ್ರೀ ಶಂಕರಭಗವತ್ಪಾದಾಚಾರ್ಯರವರು ಜ್ಞಾನಾನ್ಮೋಕ್ಷಃ ಎಂದು ಒತ್ತಿ ಒತ್ತಿ ಹೇಳುತ್ತಿರುವುದಾಗಿದೆ. ಪ್ರಪಂಚದ ಸರ್ವಕಾಮನೆಗಳನ್ನೂ ದೇಹಾತ್ಮ ಜ್ಞಾನವನ್ನೂ ತೊರೆದು ಪರಬ್ರಹ್ಮನಲ್ಲಿ ಲೀನವಾಗಬೇಕೆಂಬ ತೀವ್ರತಮವಾದ ಹಂಬಲಿಕೆಯಿಂದ ಸಮಾಧಿಯಲ್ಲಿ ಮುಳುಗುವ ಧೀರನಿಗೇನೇ ಪರಬ್ರಹ್ಮ ಪ್ರಾಪ್ತಿಯಾಗುವುದು. ಇತರರಿಗೆ ಸಾಧ್ಯವೇ ಇಲ್ಲ. ಜ್ಞಾನಶಕ್ತಿಗೆ ಸಹಾಯವಾದ ಕ್ರಿಯಾಶಕ್ತಿಯೆಂದರೆ ಯೋಗಾನುಷ್ಠಾನದ ಕಾರ್ಯವು ಕಳಾ ಸೋಪಾನದವರೆಗೇ ಹೊರತು ಮುಂದಕ್ಕಿಲ್ಲ. ಜ್ಞಾನಶಕ್ತಿಯೇ ಕಳಾಸೋಪಾನದಿಂದ ಮೇಲಕ್ಕೆ ಹತ್ತಿ ಪರಬ್ರಹ್ಮ ಸ್ವರೂಪವಾಗುವುದು

ಉಪನಿಷತ್ತಿನ ಆರನೇ ಅನುವಾಕದ ವಿವರಿಸದೇ ಉಳಿದುಕೊಂಡಿರುವ ಮಂತ್ರಗಳ ವಿಚಾರವನ್ನು ಬರೆಯೋಣ:

**"ಆಪ್ನೋತಿ ಸ್ವಾರಾಜ್ಯಮ್"** ತನ್ನ ರಾಜ್ಯವನ್ನು ಪಡೆದುಕೊಳ್ಳುವನು ಎಂದು ಅರ್ಥ, ಪರಬ್ರಹ್ಮದಲ್ಲಿ ತಾನು ಬೇರೆ ರಾಜ್ಯಬೇರೆ ಎಂಬ ವ್ಯವಹಾರಕ್ಕೆ ಅವಕಾಶವಿಲ್ಲ. ಆದುದರಿಂದ ಸ್ವಾರಾಜ್ಯವೆಂದರೆ ತನ್ನ ರೂಪವನ್ನು ಪಡೆದುಕೊಳ್ಳುವನು ಎಂದು ಅರ್ಥವನ್ನೇ ಮಾಡಬೇಕು.

**"ಆಪ್ನೋತಿ ಮನಸಸ್ಪತಿಂ"** ಅಂದರೆ ಪರಬ್ರಹ್ಮವು ಅಂತಃಕರಣದಲ್ಲಿದ್ದು ಮನಸ್ಸುಗಳಿಗೆಲ್ಲಾ ಪ್ರಕಾಶಕವಾಗಿರುವದೆಂಬ ತತ್ವ.

**"ವಾಕ್ಪತಿಶ್ಚಕ್ಷುಷ್ಪತಿಃ"** ಅಂದರೆ ಪರಬ್ರಹ್ಮವು ವಾಕ್ಕುಗಳೆಂದರೆ ಶಬ್ದಬ್ರಹ್ಮಕ್ಕೂ ಮತ್ತು ಎಲ್ಲಾ ಚಕ್ಷುಸ್ಸುಗಳಿಗೆಂದರೆ ಪ್ರಕಾಶಕ್ಕೂ ಅಧಿಪತಿಯು.

**"ಶ್ರೋತ್ರಪತಿ ರ್ವಿಜ್ಞಾನ ಪತಿಃ"!** ಶ್ರೋತ್ರಗಳೆಲ್ಲಕ್ಕೂ ಮತ್ತು ವಿಜ್ಞಾನಕ್ಕೆ ಎಂದರೆ ಇಂದ್ರಿಯ ಜ್ಞಾನಗಳಿಗೆ ನಿಶ್ಚಯಾತ್ಮಕ ಜ್ಞಾನಗಳಿಗೂ ಪ್ರಭುವು.

**"ಏತತ್ ತತೋ ಭವತಿ"!** ಮತ್ತು ಮೇಲೆ ಹೇಳಿದವುಗಳಿಗಿಂತಲೂ ಇನ್ನೂ ಹೆಚ್ಚಿನ ಮಹತ್ತಿನವನಾಗುವನು.

**"ಆಕಾಶ ಶರೀರಂ ಬ್ರಹ್ಮ"!** ಆಕಾಶದಂತೆ ಪರಬ್ರಹ್ಮನ ಶರೀರವು ಸೂಕ್ಷ್ಮವಾಗಿಯೂ ಸರ್ವವ್ಯಾಪಿಯಾಗಿಯೂ ಇರುವುದು

**"ಸತ್ಯಾತ್ಮ ಪ್ರಾಣಾರಾಮಂ ಮನಆನನ್ದಮ್"** ಸತ್ಯಾತ್ಮ ಎಂದರೆ ಯಾವ ರೂಪದಿಂದ ಇರುವುವೆಂದು ಯಾವುದು ಗೊತ್ತಾಗಿದ್ದು ಯಾವಾಗಲೂ ಆ ರೂಪವನ್ನು ಬಿಟ್ಟು ಹೋಗದೆ ಇರುವುದೋ ಅದಕ್ಕೆ ಸತ್ಯವೆಂದು ಹೆಸರು. ಆತ್ಮವು ಎಂದರೆ ಸ್ವಭಾವವು. ಆದ್ದರಿಂದ ಯಾವ ಕಾಲದಲ್ಲೂ ಬಾಧಿತವಾಗದೆ ಸ್ವಭಾವವಾಗಿರುವುದರಿಂದ ಪರಬ್ರಹ್ಮವು ಸತ್ಯಾತ್ಮ ಎನಿಸಿಕೊಳ್ಳುವುದು.

**"ಪ್ರಾಣಾರಾಮಂ"** ಪ್ರಾಣಗಳ ಆರಾಮವೆಂದರೆ ಪ್ರಾಣಗಳ ವಿಶ್ರಾಂತಿಯು ಯಾವುದರಲ್ಲಿ ಇರುವುದೊ ಅದು ಪ್ರಾಣಾರಾಮವು. **"ಪ್ರಾಣಾನ್‌ತ್ಸರ್ವಾನ್ಪರಮಾತ್ಮನಿ ಪ್ರಣಾಮಯತೀತ್ಯೇ ತಸ್ಮಾತ್ಪ್ರಣವಃ"** ಎಂಬ ಅಥರ್ವಶಿಖೋಪನಿಷತ್ತಿನ ಪ್ರಮಾಣದಂತೆ ಸಕಲ ಪ್ರಾಣಿಗಳೂ ಪರಬ್ರಹ್ಮನಲ್ಲಿ ಪ್ರಣಾಮರೂಪವಾಗಿ ಲೀನವಾಗಿ ವಿಶ್ರಾಂತಿ ರೂಪದಿಂದ ನೆಲೆಸುವುದರಿಂದ ಪರಬ್ರಹ್ಮನಿಗೆ ಪ್ರಣವ ಸ್ವರೂಪ ಅಥವಾ ಓಂಕಾರವೆಂದು ಹೆಸರು. **'ಅಹಂ'** ಜ್ಞಾನವು ಪರಬ್ರಹ್ಮನಲ್ಲಿ ಲೀನವಾಗುವ ವಿಚಾರವನ್ನು ಹಿಂದೆ ತಿಳಿಸಿರುತ್ತಷ್ಟೆ. **'ಅಹಂ'** ಜ್ಞಾನವು ಪ್ರಾಣಶಕ್ತಿಗಳನ್ನು ತನ್ನಲ್ಲಿ ಅಡಗಿಸಿಕೊಂಡು ಪರಬ್ರಹ್ಮವಾಗುವುದರಿಂದ ಪರಬ್ರಹ್ಮನು **"ಓಂ"** ಕಾರ ಅಥವಾ ಪ್ರಣವ ಸ್ವರೂಪನೆನಿಸಿಕೊಳ್ಳುವನು.

**"ಮನ ಆನನ್ದಮ್"** ಎಂದರೆ **'ಆನನ್ದಮ್ ಬ್ರಹ್ಮ'** ಎಂಬ ಈ ಉಪನಿಷತ್ಪ್ರಮಾಣದಂತೆ ಪರಬ್ರಹ್ಮನು ಆನಂದರೂಪನು. ಮನಸ್ಸು ಪರಬ್ರಹ್ಮನಲ್ಲಿ ಲೀನವಾಗಿ, ಆನನ್ದಮಗ್ನವಾಗುವದರಿಂದ ಮನೋನ್ಮನೀ ಎಂಬ ಹೆಸರು ಬರುವುದು. ಶ್ರೀ ಶಂಕರ ಭಗವತ್ಪಾದಾಚಾರ್ಯರವರು ಯೋಗತಾರಾವಳಿ ಶ್ಲೋಕದಲ್ಲಿ **"ಮನೋನ್ಮನೀ ಸಾಮಯಿ ಸನ್ನಿಧತ್ತಾಂ"** ಎಂದು ಹೇಳಿರುತ್ತಾರೆ. ಆದುದರಿಂದ ಮನಸ್ಸಿಗೆ ಉನ್ಮನೀ ಸ್ಥಿತಿಯನ್ನು ಕೊಡುವುದೇ ಪರಬ್ರಹ್ಮವು.

**"ಶಾನ್ತಿಸಮೃದ್ಧ ಮಮೃತಮ್"** ಶಾಂತಿ ಸಮೃದ್ಧಂ-ಶಾಂತಿಯೆಂದರೆ ಉಪಶಮವು. ಪರಬ್ರಹ್ಮಸ್ಥಿತಿಯಲ್ಲಿ ಉಪಶಮವು ಸಮೃದ್ಧಿಯಾಗಿರುವುದರಿಂದ ಶಾಂತಿ ಸಮೃದ್ಧವು. ಇದನ್ನು ಶ್ರೀಶಂಕರಭಗವತ್ಪಾದಾಚಾರ್ಯರವರ ಕೆಳಗಿನ ಯೋಗತಾರಾವಳೀ ವಾಕ್ಯವು ಸಮರ್ಥಿಸುವುದು.

**ವಿಚ್ಛಿನ್ನ ಸಂಕಲ್ಪ ವಿಕಲ್ಪ ಮೂಲೇ । ನಿಶ್ಶೇಷ ನಿರ್ಮೂಲಿತ ಕರ್ಮಜಾಲೇ**
**ನಿರಂತರಾಭ್ಯಾಸ ನಿತಾಂತಭದ್ರಾ । ಸಾಜೃಂಭತೇ ಯೋಗಿನಿ ಯೋಗನಿದ್ರಾ ।**

ಅಂದರೆ ಮನಸ್ಸಿನಲ್ಲಿ ಯಾವ ವಿಷಯಭಾವಗಳ ಸಂಕಲ್ಪವಾಗಲೀ ಇಂದ್ರಿಯಗಳ ಮೂಲಕ ನಡೆಯುವ ಕಾರ್ಯರೂಪವಾದ ವಿಕಲ್ಪಗಳಾಗಲೀ ಇಲ್ಲದೆ ಕ್ರಿಯಾತ್ಮಕವಾದ ಸ್ಪಂದನವೇ ಇಲ್ಲದೆ ನಿರಂತರವಾಗಿ ಯೋಗಾನುಷ್ಠಾನಪರನಾದ ಜ್ಞಾನಿಯು ಪರಮ ಮಂಗಳಕರವಾದ ಯೋಗನಿದ್ರಾ ಸ್ವರೂಪವಾದ ನಿರ್ವಿಕಲ್ಪ ಸಮಾಧಿ ಸ್ಥಿತಿಯಲ್ಲಿ ರಾರಾಜಿಸುತ್ತಿರುತ್ತಾನೆ. ಆದುದರಿಂದ ಇಂತಹ ಮಂಗಳಕರವಾದ ಯೋಗನಿದ್ರಾ ಸ್ವರೂಪವೇ ಶಾಂತಿ ಸಮೃದ್ಧಮ್ ಎನಿಸುವುದು.

**"ಅಮೃತಮ್"** ಮೃತ ಎಂದರೆ ಮರಣ. ಜನನ ಮರಣ ಧರ್ಮವುಳ್ಳದ್ದು ದೇಹ. 'ನಾನು' ಎಂಬ ಜ್ಞಾನವು ಇಂತಹ ದೇಹದ ಅವಿದ್ಯಾ ಬಂಧನದಲ್ಲಿತ್ತು. ಯೋಗಮಾರ್ಗದ ಸಹಾಯದಿಂದ ದೇಹದಲ್ಲಿರುವ ಅವಿದ್ಯಾ ಬಲೆಯ ಗ್ರಂಥಿಗಳನ್ನೆಲ್ಲ ಛಿದ್ರಮಾಡಿ 'ನಾನು' ಎಂಬ ಜ್ಞಾನವು ಮರಣ ಧರ್ಮವಿಲ್ಲದ್ದೆಂದರೆ ಅಮೃತವೆನಿಸುವ ಪರಬ್ರಹ್ಮನಲ್ಲಿ ಸೇರಿಬಿಡುವುದರಿಂದ ಜನನ ಮರಣ ರೋಗ ಸುಖದುಃಖಗಳಿಂದ ಕೂಡಿರುವ ದೇಹಬಂಧನದಿಂದ ಸಂಪೂರ್ಣವಾಗಿ ಬಿಡಲ್ಪಡುವದು.

**"ಇತಿ ಪ್ರಾಚೀನ ಯೋಗ್ಯೋಪಾಸ್ವ"** ಗುರುವಿನ ಆಜ್ಞೆಯಂತೆ ನಡೆದುಕೊಂಡು ಪರಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಂಡ ಪ್ರಾಚೀನ ಸಂಪ್ರದಾಯಸ್ಥ ಅಧಿಕಾರಿಯಂತೆ ಯೋಗ್ಯನಾಗಿರುವ ಎಲೈ ಶಿಷ್ಯನೇ ! ಐದನೇ ಅನುವಾಕದ ಮಂತ್ರದಿಂದಲೂ ವಿವರಿಸಿಕೊಂಡು ಬಂದಿರುವ ಕ್ರಮದಂತೆ ಅನುಷ್ಠಿಸಿ ಮೇಲೆ ಹೇಳಿರುವ

ಮಹಿಮೆಗಳುಳ್ಳ .ಪರಬ್ರಹ್ಮತ್ವವನ್ನು ಹೊಂದಲು ಧ್ಯಾನನಿರತನಾಗು ಎಂದು ಆಚಾರ್ಯರು ತಮ್ಮ ಶಿಷ್ಯನಿಗೆ ಆಶೀರ್ವದಿಸಿ ಹೇಳಿದರು.

ಮಹಾಚಮಸ್ಯನು ಹೇಳಿದ "**ಭೂಃ, ಭುವಃ, ಸುವಃ, ಮಹಃ**" ಎಂಬ ನಾಲಕ್ಕು ವ್ಯಾಹೃತಿಗಳ ಉಪಾಸನಾ ತತ್ವಗಳು ಇಲ್ಲಿಗೆ ಪೂರ್ಣವಾದವು. **ಭೂಃ** ತತ್ವದಿಂದ **ಭುವಃ** ತತ್ವಕ್ಕೆ ಹತ್ತುವ, **ಭುವಃ** ತತ್ವದಿಂದ **ಸುವಃ** ತತ್ವಕ್ಕೆ ಹತ್ತುವ, **ಸುವಃ** ತತ್ವದಿಂದ **ಮಹಃ** ತತ್ವವಾದ ಪರಬ್ರಹ್ಮನಲ್ಲಿ ಸೇರುವ ಧ್ಯಾನಾನುಷ್ಠಾನದ ತತ್ವಗಳೂ ಕ್ರಮವಾಗಿ ಬಂದಿವೆ. ವ್ಯಾಹೃತಿಗಳ ಉಪಾಸನೆಯೆಂದರೆ ಧ್ಯಾನಯೋಗದಲ್ಲಿ ಬುದ್ಧಿ ವೃತ್ತಿಗೆ ಜ್ಞೇಯವಾಗಿ ಗೋಚರಿಸುವ ತೇಜೋ ಬಿಂದುನಾದಗಳನ್ನು ಧರಿಸಿಕೊಂಡು, ಮುಂದು ಮುಂದಕ್ಕೆ ಅಭಿವೃದ್ಧಿಯಾಗಿ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವಿಕೆಯು ವ್ಯಾಹೃತಿಗಳ ಉಪಾಸನೆ ಎನಿಸುವುದು. ಧ್ಯಾನಾನುಷ್ಠಾನವು ಅಭಿವೃದ್ಧಿಯಾದಂತೆ ಪ್ರತಿಫಲಿತ ಚೈತನ್ಯನಾದ ಜೀವಾತ್ಮನಿಗೆ ಅವಿದ್ಯಾ ಉಪಾಧಿಗಳು ನಿವೃತ್ತಿಯಾಗುತ್ತಾಬರುವುವು. **ಮಹಃ** ಎಂಬ ವ್ಯಾಹೃತಿಯ ತತ್ವವಾದ ಪರಬ್ರಹ್ಮನಲ್ಲಿ "**ಅಹಂ**" ಜ್ಞಾನವು ಸೇರಿದ ಸಮಾಧಿ ಸ್ಥಿತಿಯಲ್ಲೂ ಪ್ರತಿಫಲಿತ ಚೈತನ್ಯನಾದ ಜೀವಾತ್ಮನಿಗೆ ಅವಿದ್ಯೆ ವಿದ್ಯೆಗಳೆಂಬ ಎರಡು ಉಪಾಧಿಗಳೂ ನಿವೃತ್ತಿಯಾಗುವುದರಿಂದ ಜೀವಾತ್ಮನೂ ಪರಮಾತ್ಮನೂ ಸಮಾನತೆಯಲ್ಲಿರುತ್ತಾರೆ. ಈ ತತ್ವವನ್ನು ಕೆಳಗಿನ ಯೋಗತತ್ತ್ವೋಪನಿಷತ್, ಶಾಂಡಿಲ್ಯೋಪನಿಷತ್, ಅನ್ನಪೂರ್ಣೋಪನಿಷತ್ತಿನ ವಾಕ್ಯಗಳು ಸಮರ್ಥಿಸುವುವು.

**ಸಮಾಧಿಸ್ಸಮತಾವಸ್ಥಾ ಜೀವಾತ್ಮ ಪರಮಾತ್ಮನೋಃ ।**
**ಜೀವಾತ್ಮ ಪರಮಾತ್ಮೈಕ್ಯಾವಸ್ಥಾ ತ್ರಿಪುಟಿ ರಹಿತಾ ।**
**ಪರಮಾನಂದ ಸ್ವರೂಪಾ ಶುದ್ಧ ಚೈತನ್ಯಾತ್ಮಿಕಾ ಭವತಿ ।**
**ಸಮಾಧಿ ಸ್ಸಂವಿದುತ್ಪತ್ತಿಃ ಪರಜೀವೈಕ್ಯತಾಂ ಪ್ರತಿ ।**

**ತಾತ್ಪರ್ಯ**—ಜೀವಾತ್ಮ ಪರಮಾತ್ಮರುಗಳ ಸಮತೆಯೆ ಸಮಾಧಿಯೆನಿಸುವುದು. ತ್ರಿಪುಟಿಯಿಲ್ಲದೆ ಜೀವಾತ್ಮ ಪರಮಾತ್ಮರ ಸಾಕ್ಷಾತ್ಕಾರವಾಗುವ ನಿಜಾನಂದರೂಪವಾಗಿ ಶುದ್ಧ ಚೈತನ್ಯವಾಗಿರುವುದೆ ಸಮಾಧಿ. ಜೀವಾತ್ಮ ಪರಮಾತ್ಮರ ಏಕತ್ವಜ್ಞಾನವೇ ಸಮಾಧಿಯೆನಿಸುವುದು.

ಈ ಉಪನಿಷತ್ತಿನ ಆನಂದವಲ್ಲಿ ಮತ್ತು ಭೃಗುವಲ್ಲಿಗಳಲ್ಲಿ **ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ,** ಕೋಶಗಳ ವಿಚಾರಗಳನ್ನು ತಿಳಿಸಿ ಈ ಐದು ಕೋಶಕ್ಕೂ ಅತೀತವಾಗಿ ಪರಬ್ರಹ್ಮವಿರುತ್ತೆಂತ

ತಿಳಿಸಿದೆ. ಅವಿದ್ಯಾ ಕಟ್ಟಿಗೆ ಒಳಪಟ್ಟ ಈ ಐದುಕೋಶಗಳೂ ಪ್ರಾಪಂಚಿಕ ವಿಷಯು ಗಳ ಕಾರ್ಯಗಳಲ್ಲಿ ನಿರತವಾಗಿವೆ. ೬ ನೆಯ ಪ್ರಕರಣದ ಪ್ರಥಮದಲ್ಲಿ ವಿವರಿಸಿರುವಂತೆ ಈ ಐದು ಕೋಶಗಳ ಕಾರ್ಯಗಳನ್ನೂ ಮೋಕ್ಷಮಾರ್ಗದ ದಾರಿಗೆ ತಿರುಗಿಸಿಕೊಂಡು ಅವುಗಳಲ್ಲಿರುವ ಅವಿದ್ಯಾಶಕ್ತಿಗಳನ್ನು ಉಪಸಂಹರಿಸಿ ಪರಬ್ರಹ್ಮಸಾಕ್ಷಾತ್ಕಾರವನ್ನು ಹೊಂದಬೇಕಾಗಿದೆ. ವಿಶ್ವತೈಜಸ, ಪ್ರಾಜ್ಞ ಅಂದರೆ–ಜಾಗ್ರತ್ಸ್ವಪ್ನ ಸುಷುಪ್ತಿ ಗಳ ಕಾರ್ಯಗಳು ಸುಷುಮ್ನಾನಾಡಿಯು ಹೊರ ಪ್ರಾಕಾರಕ್ಕೆ ಹೇಗೆ ಸೇರಿದವುಗಳಾ ಗಿವೆಯೋ ಹಾಗೆಯೇ ಪಂಚಕೋಶಗಳ ಕಾರ್ಯಗಳೂ ಸುಷುಮ್ನಾನಾಡಿಯು ಹೊರ ಪ್ರಾಕಾರಕ್ಕೆ ಸೇರಿದವುಗಳಾಗಿವೆ.

ವಿಶ್ವ, ತೈಜಸ, ಪ್ರಾಜ್ಞತ್ವದ ಉಪಾಧಿಗಳನ್ನು ಉಪಸಂಹರಿಸಿಕೊಳ್ಳಲು ಸುಷುಮ್ನಾನಾಡಿಯೊಳಗಿರುವ ಮನುಷ್ಯ ಚಿತ್ರದಲ್ಲಿ ಗುರುತಿಸುವ 'ಓಂ' ಕಾರದ 'ಅ' ಕಾರ, 'ಉ' ಕಾರ, 'ಮ' ಕಾರಗಳ ದಾರಿಯಲ್ಲೇ ಹೇಗೆ ಹೋಗ ಬೇಕೋ ಅದರಂತೆ ಪಂಚಕೋಶಗಳ ಉಪಾಧಿಗಳನ್ನೂ ಉಪಸಂಹರಿಸಿಕೊಳ್ಳಲು ಸುಷು ಮ್ನಾನಾಡಿಯು ದಾರಿಯಲ್ಲೇ ಶಿರಸ್ಸಿನಲ್ಲಿರುವ ಹೃದಯಾಕಾಶವನ್ನು ಸೇರಬೇಕು. ಹಿಂದೆ ತಿಳಿಸಿರುವ ಭೂಃ, ಭುವಃ, ಸುವಃ ಎಂಬ ವ್ಯಾಹೃತಿಗಳ, ವಿಶ್ವ, ತೈಜಸ, ಪ್ರಾಜ್ಞ ಮತ್ತು ಪಂಚಕೋಶಗಳ ಉಪಾಧಿಗಳನ್ನು ಉಪಸಂಹರಿಸಿಕೊಳ್ಳುವಿಕೆಯು ಏಕ ತತ್ವಾರ್ಥದವುಗಳಾಗಿ ಸುಷುಮ್ನಾನಾಡಿಯೊಳಕ್ಕೆ ಸಂಬಂಧಪಟ್ಟದುದಾಗಿದೆ. ತತ್ವಶಃ ಭಿನ್ನವಾವುದಗಳಲ್ಲ. ಆನಂದವಲ್ಲಿಯ ಎಂಟನೆ ಅನುವಾಕದ ಮಂತ್ರವನ್ನು ಕೆಳಗೆ ಬರೆದು ಪಂಚಕೋಶಗಳ ಉಪಾಧಿಗಳನ್ನು ಉಪಸಂಹರಿಸಿಕೊಳ್ಳುವಿಕೆಯ ವಿಚಾರವನ್ನು ವಿವರಿಸೋಣ.

**ಸ ಯ ಏವಂವಿತ್ । ಅಸ್ಮಾಲ್ಲೋಕಾತ್ ಪ್ರೇತ್ಯ । ಏತಮನ್ನ ಮಯಮಾತ್ಮಾನಮುಪಸಂಕ್ರಾಮತಿ । ಏತಂ ಪ್ರಾಣಮಯ ಮಾತ್ಮಾನ ಮುಪಸಂಕ್ರಾಮತಿ । ಏತಂ ಮನೋಮಯಮಾತ್ಮಾ ನಮುಪಸಂಕ್ರಾಮತಿ । ಏತಂ ವಿಜ್ಞಾನಮಯ ಮಾತ್ಮಾನಮುಪಸಂಕ್ರಾ ಮತಿ । ಏತಮಾನನ್ದಮಯಮಾತ್ಮಾನಮುಪಸಂಕ್ರಾಮತಿ ।**

**ತಾತ್ಪರ್ಯ**—ಯಾವನು ಹೀಗೆ ಅರಿತುಕೊಂಡಿರುವನೋ ಅವನು ಈ ವಿಷಯ ಲೋಕದಿಂದ ಹೊರಟು ಹೋಗಿ ಈ ಅನ್ನಮಯನೆಂಬ ಆತ್ಮನನ್ನು ದಾಟುತ್ತಾನೆ. ಈ ಪ್ರಾಣಮಯನೆಂಬ ಆತ್ಮನನ್ನು ದಾಟುತ್ತಾನೆ. ಈ ಮನೋಮಯನೆಂಬ ಆತ್ಮನನ್ನು ದಾಟುತ್ತಾನೆ. ಈ ವಿಜ್ಞಾನಮಯನೆಂಬ ಆತ್ಮನನ್ನು ದಾಟುತ್ತಾನೆ. ಈ ಆನಂದ ಮಯನೆಂಬ ಆತ್ಮನನ್ನು ದಾಟುತ್ತಾನೆ.

ಈ ಮಂತ್ರದಲ್ಲಿರುವ **"ಸ ಯ ಏವಂವಿತ್"** ಎಂಬುದಕ್ಕೆ ಯಾವನೇ ಆಗಲಿ, ಇದುವರಿವಿಗೂ ತಿಳಿಸಿದ ಸತ್ಯವೂ ಜ್ಞಾನವೂ ಅನಂತವೂ ಆದ ಪರಬ್ರಹ್ಮವೇ ನಾನಾಗಿರುವೆನು ಎಂದು ತಿಳಿದುಕೊಂಡಿರುವನೋ, ಆವನಿಗೆ "ಏವಂವಿತ್" ಎಂಬುದು ಅನ್ವಯಿಸುವುದು. ತಿಳಿವಳಿಕೆಯೆಂದರೆ ಜ್ಞಾನ. ಇದರಲ್ಲಿ ಎರಡುವಿಧ. ಒಂದು ಪರೋಕ್ಷಜ್ಞಾನ. ಇನ್ನೊಂದು ಅಪರೋಕ್ಷ ಜ್ಞಾನ. ಮೋಕ್ಷಾಭಿಲಾಷೆಯಿಂದ ಗುರುಮುಖೇನ ತಾನೇ ಬ್ರಹ್ಮನಾಗಿರುವೆನು ಎಂಬ ಆತ್ಮತತ್ವವನ್ನು ಶ್ರವಣಮಾಡಿ, ಪರಬ್ರಹ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಹಂಬಲಿಸುತ್ತಿರುವ ಅಧಿಕಾರಿಯು ಪರೋಕ್ಷಜ್ಞಾನಿ ಎಂದು ಕರೆಯಲ್ಪಡುವನು. ಇವನು ಪ್ರತ್ಯಕ್ಷವಾಗಿ ಪರಮಾತ್ಮ ಸಾಕ್ಷಾತ್ಕಾರದ ಅನುಭವವನ್ನು ಇನ್ನೂ ಪಡೆದಿಲ್ಲವನಾದುದರಿಂದ ಪರೋಕ್ಷಜ್ಞಾನಿ. ಇಂತಹ ಪರೋಕ್ಷಜ್ಞಾನಿಯು ಪರಮಾತ್ಮಸಾಕ್ಷಾತ್ಕಾರ ಮಾಡಿಕೊಳ್ಳಲು ಹೊರಗಿನ ವಿಷಯಾದಿಗಳಲ್ಲಿ ವಿರಕ್ತನಾಗಿ, ಅಂತರ್ಮುಖದ ದಾರಿಯಾದ ಧ್ಯಾನಾನುಷ್ಠಾನದಲ್ಲಿ ಸುಷುಮ್ನಾನಾಡಿಯ ಮೂಲಕ, ಐದುಕೋಶಗಳ ತತ್ವಗಳ ಅವಿದ್ಯಾ ಶಕ್ತಿಗಳನ್ನೂ ಉಪಸಂಹರಿಸಿಕೊಂಡು, ಶಿರಸ್ಸಿನಲ್ಲಿರುವ ಹೃದಯಾಕಾಶವೆಂದರೆ ಗುಹೆಯೊಳಗೆ ಪರಬ್ರಹ್ಮಸಾಕ್ಷಾತ್ಕಾರವನ್ನು ಮಾಡಿಕೊಳ್ಳುವನು. ಇಂತಹವನು ಜೀವನ್ಮುಕ್ತನೆಂದು ಕರೆಸಿಕೊಳ್ಳುವನು.

ಜೀವನ್ಮುಕ್ತನು ದೇಹಪತನಕಾಲದಲ್ಲಿ ಸುಷುಮ್ನಾನಾಡಿಯ ಮೂಲಕವೇ ಐದು ಕೋಶಗಳನ್ನೂ ದಾಟಿಕೊಂಡು, ಶಿರಸ್ಸಿನಲ್ಲಿರುವ ಹೃದಯಾಕಾಶದ ಗುಹೆಯಲ್ಲಿ ಪರಬ್ರಹ್ಮನಾಗುವನು. ಆದುದರಿಂದ ಪರೋಕ್ಷಜ್ಞಾನಿಗಾಗಲಿ ಅಪರೋಕ್ಷಜ್ಞಾನಿಗಾಗಲಿ, ಅಂದರೆ ಜೀವನ್ಮುಕ್ತಸ್ಥಿತಿಯನ್ನು ಪಡೆಯುವವನಾಗಲಿ, ವಿದೇಹಮುಕ್ತಿಯನ್ನು ಪಡೆಯುವವನಾಗಲಿ, ಸುಷುಮ್ನಾನಾಡಿಯೊಳಗೆ ಐದು ಕೋಶಗಳ ತತ್ವಗಳಿಗೂ ಒಳಗಿರುವ ಹೃದಯಾಕಾಶದ ಗುಹೆಗೇ ಹೋಗಬೇಕು, ಆದುದರಿಂದ ಮೇಲಿನ ಉಪನಿಷತ್ತಿನ ಮಂತ್ರವು ಜೀವನ್ಮುಕ್ತಿವಿದೇಹಮುಕ್ತಿಗಳೆರಡರ ತತ್ವಕ್ಕೂ ಅನ್ವಯವಾಗುವುದು. ಮೇಲಿನ ಉಪನಿಷತ್ತಿನ ಮಂತ್ರದಲ್ಲಿ **"ಅಸ್ಮಾಲ್ಲೋಕಾತ್ ಪ್ರೇತ್ಯ ।"** ಅಂದರೆ ಈ ಲೋಕದಿಂದ ಹೊರಟುಹೋಗಿ ಎಂಬುದು ಸಾಮಾನ್ಯವಾದ ಅರ್ಥ. ಇಲ್ಲಿರುವ ಲೋಕಶಬ್ದಕ್ಕೆ ಶ್ರೀಶಂಕರಭಗವತ್ಪಾದಾಚಾರ್ಯರವರು ಭಾಷ್ಯದಲ್ಲಿ **"ಕಂಡ ಮತ್ತುಕಾಣದ ಇಷ್ಟವಾದ ವಿಷಯಗಳ ಸಮುದಾಯವೇ ಈ ಲೋಕವು"** ಎಂದು ಬರೆದಿರುತ್ತಾರೆ. ಅಂದರೆ ನಾವು ವ್ಯವಹಾರಮಾಡುವ ವಿಷಯಗಳೇ ಲೋಕದ ತತ್ವ. ಈ ಲೋಕದಿಂದ ಹೊರಡುವುದೆಂದರೆ ಬಾಹ್ಯವಿಷಯಾದಿಗಳಲ್ಲಿ ಅಪೇಕ್ಷೆಯಿಲ್ಲದವನಾಗಿ ಬಾಹ್ಯದೃಷ್ಟಿಯನ್ನು ತ್ಯಜಿಸಿ ಅಂತರ್ಮುಖಕ್ಕೆ ಪ್ರವೇಶಿಸಿ ಅಂದರೆ ಧ್ಯಾನದಲ್ಲಿ ಮಗ್ನನಾಗಿ ಸುಷುಮ್ನಾನಾಡಿಯ ದಾರಿಯಲ್ಲಿ ಪ್ರವೇಶಿಸಬೇಕು.

ಸುಷುಮ್ನಾ ನಾಡಿಯಲ್ಲಿರುವ **ಮೂಲಾಧಾರಚಕ್ರವು ಭೂತತ್ವ, ಸ್ವಾಧಿಷ್ಠಾನಚಕ್ರವು ಜಲದತತ್ವ**, ಮೂಲಾಧಾರ, ಸ್ವಾಧಿಷ್ಠಾನಚಕ್ರಗಳೆರಡೂ ಅಂದರೆ ಭೂ, ಜಲಗಳತತ್ವಗಳೆರಡೂ ಸೇರಿ ಅನ್ನಮಯಕೋಶದ ತತ್ವವಾಗಿದೆ. ಧ್ಯಾನದಲ್ಲಿ ಅಭಿವೃದ್ಧಿಯಾಗಿ ಮೂಲಾಧಾರ ಸ್ವಾಧಿಷ್ಠಾನಚಕ್ರಗಳೆರಡನ್ನೂ ದಾಟಿ, ಮಣಿಪೂರ ಚಕ್ರವನ್ನು ಸೇರಿದಾಗ, ಜೀವಾತ್ಮನಿಗೆ ಇದ್ದ ಅನ್ನಮಯಕೋಶದ ಉಪಾಧಿಯು ನಿವೃತ್ತಿಯಾಗುವುದು. ಅನ್ನಮಯಕೋಶದ ಉಪಾಧಿಯು ನಿವೃತ್ತಿಯಾಗುವವರೆಗೆ ಜೀವಾತ್ಮನು **'ಅನ್ನಮಯಮಾತ್ಮಾ'** ಎಂದು ಕರೆಯಲ್ಪಡುವನು. ಸುಷುಮ್ನಾ ನಾಡಿಯಲ್ಲಿರುವ **ಮಣಿಪೂರಕಚಕ್ರವು ಅಗ್ನಿ ತತ್ವ. ಅನಾಹತಚಕ್ರವು ವಾಯು ತತ್ವ.** ಅಗ್ನಿ ಮತ್ತು ವಾಯುಗಳೆರಡರ ತತ್ವಗಳೂ ಸೇರಿ ಪ್ರಾಣಮಯಕೋಶವಾಗಿದೆ. ಧ್ಯಾನದಲ್ಲಿ ಅಭಿವೃದ್ಧಿಯಾಗಿ ಮಣಿಪೂರ ಮತ್ತು ಅನಾಹತಚಕ್ರಗಳೆರಡನ್ನೂ ದಾಟಿದರೆ ಜೀವಾತ್ಮನಿಗೆ ಇದ್ದ ಪ್ರಾಣಮಯಕೋಶದ ಉಪಾಧಿಯು ನಿವೃತ್ತಿಯಾಗುವುದು. ಪ್ರಾಣಮಯ ಕೋಶದ ಉಪಾಧಿಯು ನಿವೃತ್ತಿಯಾಗುವವರೆಗೆ ಜೀವಾತ್ಮನು **"ಪ್ರಾಣಮಯಮಾತ್ಮಾ"** ಎಂದು ಕರೆಯಲ್ಪಡುವನು.

ಸುಷುಮ್ನಾ ನಾಡಿಯಲ್ಲಿರುವ **ವಿಶುದ್ಧಚಕ್ರವು ಆಕಾಶದ ತತ್ವನಾಗಿ** ಮನೋಮಯಕೋಶಕ್ಕೆ ಪ್ರಧಾನಸ್ಥಳವಾಗಿದೆ. ಧ್ಯಾನದಲ್ಲಿ ಅಭಿವೃದ್ಧಿಯಾಗಿ ವಿಶುದ್ಧಚಕ್ರವನ್ನು ದಾಟಿ ಆಜ್ಞಾಚಕ್ರದ ಕಡೆಗೆ ಹೋದರೆ, ಜೀವಾತ್ಮನಿಗೆ ಇದ್ದ ಮನೋಮಯ ಕೋಶದ ಉಪಾಧಿಯು ನಿವೃತ್ತಿಯಾಗುವುದು. ಮನೋಮಯಕೋಶದ ಉಪಾಧಿಯು ನಿವೃತ್ತಿಯಾಗುವವರೆಗೆ ಜೀವಾತ್ಮನು **"ಮನೋಮಯಾತ್ಮಾ"** ಎಂದು ಕರೆಸಿಕೊಳ್ಳುವನು. ಧ್ಯಾನದಲ್ಲಿ ಅಭಿವೃದ್ಧಿಯಾಗಿ **ವಿಜ್ಞಾನಮಯಕೋಶಕ್ಕೆ ಪ್ರಧಾನಸ್ಥಳವಾದ ಆಜ್ಞಾಚಕ್ರವನ್ನು** ದಾಟಿದರೆ, ಜೀವಾತ್ಮನಿಗೆ ಇದ್ದ ವಿಜ್ಞಾನಮಯ ಕೋಶದ ಉಪಾಧಿಯು ನಿವೃತ್ತಿಯಾಗುವುದು. ವಿಜ್ಞಾನಮಯಕೋಶದ ಉಪಾಧಿಯು ನಿವೃತ್ತಿಯಾಗುವವರೆಗೆ ಜೀವಾತ್ಮನು **"ವಿಜ್ಞಾನಮಯಮಾತ್ಮಾ"** ಎಂದು ಕರೆಸಿಕೊಳ್ಳುವನು. ಧ್ಯಾನಾಭಿವೃದ್ಧಿಯಿಂದ ಆಜ್ಞಾಚಕ್ರವನ್ನು ದಾಟಿದ ಮೇಲೆ ಜೀವಾತ್ಮನು ಕಳಾಸೋಪಾನದಲ್ಲಿ ನಿಲ್ಲುವನು. ಕಳಾಸೋಪಾನವೇ ಜೀವಾತ್ಮನಿಗೆ **ಆನಂದಮಯಕೋಶದ ಉಪಾಧಿಯಾಗಿದೆ.** ಕಳಾಸೋಪಾನವನ್ನು ಧ್ಯಾನದಲ್ಲಿ ದಾಟಿ ಶಿರಸ್ಸಿನಲ್ಲಿರುವ ಹೃದಯಾಕಾಶವಾದ ಗುಹೆಯನ್ನು ಜೀವಾತ್ಮನು ಪ್ರವೇಶಿಸಿದರೆ ಆನಂದಮಯಕೋಶದ ಉಪಾಧಿಯಿಂದಲೂ ನಿವೃತ್ತನಾಗಿ, ಅಂದರೆ ಆನಂದಮಯತ್ವವು ಹೋಗಿ **"ಆನಂದೀಭವತಿ** ಎಂಬ ಶ್ರುತಿವಚನಾನುಸಾರ ಆನಂದಸ್ವರೂಪನಾಗುತ್ತಾನೆಂದರೆ ಪರಬ್ರಹ್ಮನಾಗುತ್ತಾನೆ. ಪಂಚಕೋಶದ ಉಪಾಧಿಗಳನ್ನು ದಾಟಿರುವ ಈ ಸ್ಥಿತಿಯು ಪರಬ್ರಹ್ಮಸಾಕ್ಷಾತ್ಕಾರದ ಸ್ಥಿತಿಯೆಂಬುದನ್ನು ಆನಂದವಲ್ಲಿಯ ಒಂಬತ್ತನೆ ಅನುವಾಕದ ಮುಂದಿನ ಮಂತ್ರವೇ ಸಮರ್ಥಿಸುವುದು:

**ಯತೋ ವಾಚೋ ನಿವರ್ತನ್ತೇ । ಅಪ್ರಾಪ್ಯ ಮನಸಾ ಸಹ ।**
**ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕುತಶ್ಚನೇತಿ ।**

ಮನಸ್ಸಿನಿಂದಲೂ ತಿಳಿಯಲಶಕ್ಯವಾದ ಯಾವ ಬ್ರಹ್ಮವನ್ನು ವರ್ಣಿಸಲು ವಾಕ್ಕುಗಳು ಹಿಂತೆಗೆಯುವುವೋ ಅಂತಹ ಆನಂದರೂಪವಾದ ಬ್ರಹ್ಮವನ್ನು ತಿಳಿದವನು ಯಾವುದಕ್ಕೂ ಭಯಪಡುವುದಿಲ್ಲ. ಪಂಚಕೋಶಗಳನ್ನು ದಾಟುವ ಹಿಂದಿನ ಮಂತ್ರ ದಂತೆಯೇ ಭೃಗುವಲ್ಲಿಯಲ್ಲೂ ಮಂತ್ರವಿದೆ. ಭೃಗುವಲ್ಲಿಯಲ್ಲಿರುವ ಮಂತ್ರವು ಈಶ್ವರ ಸೋಪಾನಕ್ಕೆ ಸಂಬಂಧಪಟ್ಟಿರುವುದು. ಇಲ್ಲಿಯ ಮಂತ್ರವು ಪರಬ್ರಹ್ಮಸೋಪಾನಕ್ಕೆ ಸಂಬಂಧಪಟ್ಟದ್ದು.

ಶಿಕ್ಷಾವಲ್ಲಿಯಲ್ಲಿ ಬರುವ ಅಗ್ನಿ, ವಾಯು, ಆದಿತ್ಯರ ಸೋಪಾನವನ್ನು ದಾಟಲು ಅನುಷ್ಠಿಸುವ ಮಾರ್ಗದಲ್ಲೇ ಆನಂದವಲ್ಲಿ ಭೃಗುವಲ್ಲಿಗಳಲ್ಲಿ ತಿಳಿಸಿರುವ ಅನ್ನಮಯಾದಿ ಪಂಚಕೋಶಗಳನ್ನೂ ದಾಟಬೇಕಾಗುವುದು. ಬೇರೆ ಅನುಷ್ಠಾನದ ದಾರಿಯೇ ಇಲ್ಲ. ಶ್ರವಣ, ಮನನ, ನಿದಿಧ್ಯಾಸ, ಸಮಾಧಿಗಳಲ್ಲಿ ಶ್ರವಣ ಮನನದಿಂದಲೆ ಸಾಕ್ಷಾತ್ಕಾರ ವಾಗಲಾರದು. ನಿದಿಧ್ಯಾಸವೆಂದರೆ ಧ್ಯಾನಯೋಗಾನುಷ್ಠಾನ. ಧ್ಯಾನಯೋಗದ ಸಹಾಯದಿಂದಲೆ ಸಾಕ್ಷಾತ್ಕಾರವಾಗಿ ಜ್ಞಾನಿ ಎನಿಸಿಕೊಳ್ಳುವನು. ಆನಂದವಲ್ಲಿಯಲ್ಲಿ ಅನ್ನಮಯಕೋಶವನ್ನು ದಾಟು ಪ್ರಾಣಮಯಕೋಶವನ್ನು ದಾಟು ಎಂದಿದೆ. ದಾಟು ಎಂಬ ಪದದ ಅರ್ಥವು ಕ್ರಿಯಾತ್ಮಕವಾಗಿ ಅನುಷ್ಠಾನದ ಕಾರ್ಯದಲ್ಲಿ ಒಂದು ಕೋಶ ವನ್ನು ದಾಟಿ ಮತ್ತೊಂದು ಕೋಶಕ್ಕೆ ಹತ್ತು ಎಂಬುದನ್ನೇ ಸೂಚಿಸುವುದು. ಅಲ್ಲದೆ ಭೃಗುವಲ್ಲಿಯಲ್ಲಿ ತಪಸ್ಸುಮಾಡಿದನು ಎಂಬುದಾಗಿ ಹೇಳಿದೆ. ತಪಸ್ಸೆಂದರೆ ಅಂತ ರಿಂದ್ರಿಯ ಬಹಿರಿಂದ್ರಿಯ ನಿಗ್ರಹವೆಂದು ಭಾಷ್ಯದಲ್ಲಿ ಸ್ಪಷ್ಟವಾಗಿದೆ. ಅಂತರಿಂದ್ರಿಯ ಬಹಿರಿಂದ್ರಿಯ ನಿಗ್ರಹವು ಧ್ಯಾನಯೋಗಾನುಷ್ಠಾನದಲ್ಲೇ ಹೊಂದತಕ್ಕದ್ದಾಗಿದೆ. ಶಿಕ್ಷಾ ವಲ್ಲಿಯ ಭಾಷ್ಯದಲ್ಲಿ ಉಪಾಸನೆ ಮಾಡೆಂದು ಹೇಳಿದೆ. ಉಪಾಸನೆಯೆಂದರೂ ಧ್ಯಾನ ಯೋಗಾನುಷ್ಠಾನವೆ ಆಗಿದೆ. ಆದುದರಿಂದ ಶಿಕ್ಷಾವಲ್ಲಿ ಆನಂದವಲ್ಲಿ ಭೃಗುವಲ್ಲಿಗಳ ತತ್ವಗಳು ಒಂದೇ ಮಾರ್ಗದ್ದಾಗಿದೆಯೆ ಹೊರತು ಭಿನ್ನವಾದ ಮಾರ್ಗಗಳದ್ದಲ್ಲ.

# ೧೦ ನೆಯ ಪ್ರಕರಣ

## ಬ್ರಹ್ಮದ ಪಾಙ್ಕ್ತೋಪಾಸನೆ

### ೭ನೆಯ ಅನುವಾಕದ ಮಂತ್ರ

**ಪೃಥಿವ್ಯನ್ತರಿಕ್ಷಂ ದ್ಯೌರ್ದಿಶೋಽವಾನ್ತರದಿಶಾಃ । ಅಗ್ನಿರ್ವಾಯುರಾದಿತ್ಯಶ್ಚನ್ದ್ರಮಾ ನಕ್ಷತ್ರಾಣಿ । ಆಪ ಓಷಧಯೋ ವನಸ್ಪತಯ ಆಕಾಶ ಆತ್ಮಾ । ಇತ್ಯಧಿಭೂತಮ್ । ಅಥಾಧ್ಯಾತ್ಮಮ್ । ಪ್ರಾಣೋ ವ್ಯಾನೋಽಪಾನ ಉದಾನಃ ಸಮಾನಃ । ಚಕ್ಷುಃ ಶ್ರೋತ್ರಂ ಮನೋ ವಾಕ್ ತ್ವಕ್ । ಚರ್ಮ ಮಾಗ್ಂ ಸಗ್ಂ ಸ್ನಾವಾಸ್ಥಿಮಜ್ಜಾ । ಏತದಧಿವಿಧಾಯ ಋಷಿರವೋಚತ್ । ಪಾಙ್ಕ್ತಂ ವಾ ಇದಗ್ಂ ಸರ್ವಮ್ । ಪಾಙ್ಕ್ತೇನೈವ ಪಾಙ್ಕ್ತಗ್ಂ ಸ್ಪೃಣೋತೀತಿ ॥ ೭ ॥**

### ಸಮಷ್ಟಿ ಅಥವ ವಿರಾಟ್‌ಸ್ವರೂಪಪಾಙ್ಕ್ತ

೧) **ಲೋಕಪಾಙ್ಕ್ತ** :—ಪೃಥ್ವಿ – ಅಂತರಿಕ್ಷ–ಸ್ವರ್ಗ – ದಿಕ್ಕುಗಳು – ಅವಾಂತರ ದಿಕ್ಕುಗಳು.

೨) **ದೇವತಾಪಾಙ್ಕ್ತ** :—ಅಗ್ನಿ – ವಾಯು – ಆದಿತ್ಯ – ಚಂದ್ರ – ನಕ್ಷತ್ರಗಳು.

೩) **ಭೂತಪಾಙ್ಕ್ತ** :—ನೀರು – ಗಿಡಗಳು – ಮರಗಳು – ಆಕಾಶ – (ಆತ್ಮಾ), ವಿರಾಟ್‌ಸ್ವರೂಪನು.

ಸಮಷ್ಟಿ ಅಥವಾ ಜಗದ್ರೂಪವಾದ ವಿರಾಟ್‌ಸ್ವರೂಪವು ಈ ಮೂರು ಪಾಙ್ಕ್ತಗಳಿಂದ ಉಂಟಾಗಿರುತ್ತೆ. ಜಗತ್ತಿನ ಉಪಸಂಹಾರ ಕಾಲದಲ್ಲಿ ಈಶ್ವರನು ಈ ಪಾಙ್ಕ್ತತ್ರಯವನ್ನು ತನ್ನಲ್ಲಿ ಉಪಸಂಹರಿಸಿಕೊಂಡು ತಾನು ಪರಬ್ರಹ್ಮಸ್ವರೂಪನಾಗುತ್ತಾನೆ.

### ವ್ಯಷ್ಟಿ ಅಥವಾ ಮನುಷ್ಯದೇಹದಪಾಙ್ಕ್ತ

೧) **ಪ್ರಾಣಪಾಙ್ಕ್ತ** :—ಪ್ರಾಣ – ವ್ಯಾನ – ಅಪಾನ – ಉದಾನ – ಸಮಾನ.

೨) **ಇಂದ್ರಿಯಪಾಙ್ಕ್ತ** :—ಚಕ್ಷು – ಶ್ರೋತ್ರ – ಮನಸ್ಸು ವಾಕ್ – ತ್ವಕ್ಕು.

೩) **ಧಾತುಪಾಙ್ಕ್ತ** :—ಚರ್ಮ – ಮಾಂಸ – ನರ – ಮೂಳೆ – ಕೊಬ್ಬು.

ವ್ಯಷ್ಟಿ ಅಥವಾ ಮನುಷ್ಯದೇಹವು ಈ ಮೂರು ಪಾಙ್ಕ್ತಗಳಿಂದ ಸೃಷ್ಟಿಯಾಗಿ ಅವಿದ್ಯಾಬಂಧನದಲ್ಲಿರುತ್ತೆ. ಈ ಅವಿದ್ಯಾಬಂಧನವನ್ನು ಪರಿಹರಿಸಿಕೊಳ್ಳಲು ಓಂಕಾರೋಪಾಸನೆಯ ಮೂಲಕ ಈ ಪಾಙ್ಕ್ತತ್ರಯಗಳನ್ನು ಉಪಸಂಹರಿಸಿಕೊಂಡೇ ಮೋಕ್ಷವನ್ನು ಹೊಂದಬೇಕಾಗಿರುತ್ತೆ. ಅಂದರೆ ೬ನೇ ಅನುವಾಕದ ಮಂತ್ರದಲ್ಲಿ ತಿಳಿಸಿದ ವ್ಯಾಹೃತಿಗಳ ಅನುಷ್ಠಾನದ ಮೂಲಕ ಬ್ರಹ್ಮಸಾಕ್ಷಾತ್ಕಾರ ಪಡೆಯುವ ಮಾರ್ಗವೇ ಈ ಪಾಙ್ಕ್ತತ್ರಯಗಳ ಉಪಸಂಹಾರ ಮಾರ್ಗವಾಗಿರುತ್ತೆ.

# ೧೧ನೇ ಪ್ರಕರಣ

## ಜೀವನ್ಮುಕ್ತಸ್ಥಿತಿ

೧೧ನೇ ಪ್ರಕರಣದಲ್ಲಿರುವ ವಿಷಯಗಳು :—[ಓಂಕಾರಸಾಕ್ಷಾತ್ಕಾರ ಸ್ವರೂಪವಾದ ಸಮಾಧಿಯಿಂದ ಬಹಿರ್ಮುಖವಾಗುವಿಕೆ. ದೇಹವಿರುವ ಪರ್ಯಂತ ಅನುಭವಿಸುವ ಜೀವನ್ಮುಕ್ತಸ್ಥಿತಿ. ಓಂಕಾರಸಾಕ್ಷಾತ್ಕಾರದ ಸ್ಥಿತಿಯಲ್ಲಿ ಬುದ್ಧಿವೃತ್ತಿಯು ಜ್ಞಾನನಾಡಿಯಾದ ಸುಷುಮ್ನಾಮಾರ್ಗದಲ್ಲಿ ಹೋಗಿ ಶಿರಸ್ಸಿನೊಳಗೆ ಹೃದಯಾಕಾಶವೆನಿಸುವ ಪರಬ್ರಹ್ಮನಲ್ಲಿ ಲೀನವಾಗುವ ಮತ್ತು ಜೀವನ್ಮುಕ್ತಸ್ಥಿತಿಯಲ್ಲಿ ಬುದ್ಧಿಗೆ ವೃತ್ತಿಯೆ ಇಲ್ಲದೆ ಮೂಕನಂತೆ ಇರುವ ವಿಚಾರಗಳ ವಿವರಣೆ. ಜೀವನ್ಮುಕ್ತನ ಕೃತಕೃತ್ಯತೆಯ ವರ್ಣನೆ. ಆನಂದವಲ್ಲಿಯಲ್ಲಿ ತಿಳಿಸುವ 'ಸಂಕ್ರಾಮತಿ' ಭೃಗುವಲ್ಲಿಯಲ್ಲಿರುವ 'ಸಂಕ್ರಮ್ಯ' ಎಂಬ ಎರಡು ಪದಗಳಿಗೂ ಇರುವ ಗೋಪ್ಯವಾದ ತಾರತಮ್ಯದ ತತ್ವದ ವಿವರಣೆ.]

ಆನಂದವಲ್ಲಿಯಲ್ಲಿರುವ 'ಏತಮನ್ನಮಯಮಾತ್ಮಾನಂ ಉಪಸಂಕ್ರಾಮತಿ' ಇತ್ಯಾದಿ ಪಂಚಕೋಶಗಳ ತತ್ವಗಳಿಂದಲೂ, ಶಿಕ್ಷಾವಲ್ಲಿಯಲ್ಲಿರುವ ಭೂರಾದಿ ವ್ಯಾಹೃತಿಗಳ ತತ್ವಗಳಿಂದಲೂ ಶಿರಸ್ಸಿನಲ್ಲಿರುವ ಹೃದಯಾಕಾಶವೆನಿಸುವ ಗುಹೆಯಲ್ಲಿ ಪರಮಾತ್ಮಸಾಕ್ಷಾತ್ಕಾರ ಸ್ವರೂಪವಾದ ನಿರ್ವಿಕಲ್ಪ ಸಮಾಧಿಯು ಲಭ್ಯವಾಗುತ್ತೆಂದು

ಇದುವರಿಗೂ ತಿಳಿಸಿತು. ದೇಹವು ಜನಿಸಿದಾಗ ಇಷ್ಟೇ ವರ್ಷಗಳು ದೇಹವು ಸ್ಥಿತಿಯಲ್ಲಿ ಇರಬೇಕೆಂದು ಆಯುಃಪ್ರಮಾಣವನ್ನು ಈಶ್ವರನೇ ಗೊತ್ತುಮಾಡಿರುತ್ತಾನೆ. ಆಯುಸ್ಸು ಪೂರ್ಣವಾಗುವವರೆಗೆ ಪ್ರಾರಬ್ಧಕರ್ಮದ ದೇಹವ್ಯಾಪಾರವು ನಡದೇ ನಡೆಯುವುದು. ಪ್ರಾರಬ್ಧಕರ್ಮದ ವೇಗದಿಂದ ಹೆಚ್ಚುಕಾಲ ನಿರ್ವಿಕಲ್ಪಸಮಾಧಿಯಲ್ಲಿ ಇರಲು ಸಾಧ್ಯವಿಲ್ಲ. "ಕಂಚಿತ್‌ಕಾಲ ಸಮಾಧಾಯ ಪರೇಬ್ರಹ್ಮಣಿಮಾನಸಂ" ಅಂದರೆ ಒಂದು ಕ್ಷಣ ಈ ಸಮಾಧಿಸ್ಥಿತಿ ಪ್ರಾಪ್ತವಾದರೂ ಧನ್ಯರಾಗುತ್ತಾರೆಂದು ಶ್ರೀ ಶಂಕರ ಭಗವತ್ಪಾದಾಚಾರ್ಯರವರು ವಿವೇಕಚೂಡಾಮಣಿಯಲ್ಲಿ ಹೇಳಿರುತ್ತಾರೆ.

ನಿರ್ವಿಕಲ್ಪ ಸಮಾಧಿಯಲ್ಲಿ ಪರಬ್ರಹ್ಮಾಕಾರವಾಗಿದ್ದ **'ಅಹಂ'** ಜ್ಞಾನವು ಸಮಾಧ್ಯನಂತರ ಪರಬ್ರಹ್ಮರೂಪದಿಂದ ಪ್ರತ್ಯೇಕಿಸಿಕೊಂಡು 'ಅಹಂ' ಜ್ಞಾನವಾಗಿ ಪುನಃ ಉದಯಿಸಿ ಕಳಾರೂಪದಲ್ಲಿನೆಲಸಿ, ಅಲ್ಲಿಂದ ಸುಷುಮ್ನಾನಾಡಿಯಲ್ಲೇ ಕೆಳಕ್ಕೆ ಇಳಿದು, ದೇಹವನ್ನು ಧರಿಸಿ ವ್ಯಾಪಾರಕ್ಕೆ ಅನುಕೂಲವಾಗಲು ವಿಸರ್ಗ '(ಅಃ)'ದ ಶಕ್ತಿಯಾದ .**ಶ್ರೀ ಕುಂಡಲಿನೀಶಕ್ತಿಯನ್ನು** ಮೂಲಾಧಾರಚಕ್ರದಲ್ಲಿ ನಿಲ್ಲಿಸಿ, ತಾನು ಅಂತಃಕರಣದ ಜೊತೆಯಲ್ಲಿರಲು, ಸುಷುಮ್ನಾ ಹೊರಪ್ರಕಾರದ ಮಾರ್ಗವಾಗಿ ಶಿರಸ್ಸಿಗೆ ಹೋಗಿ ನೆಲೆಸುವುದು. ಮನುಷ್ಯನ ಚಿತ್ರಪಠದ ಶಿರಸ್ಸಿನಲ್ಲಿ ಅಂತಃಕರಣ ವಿರುವ ಸ್ಥಳವನ್ನು ಗುರುತಿಸಿರುವುದು. ಬುದ್ಧಿಯು ಶಿರಸ್ಸಿಗೆ ಹೋಗಿ ನೆಲೆಸಿದ ಈ ಸ್ಥಿತಿಯಲ್ಲಿ, ವೃತ್ತಿಯಿಲ್ಲದೆ ಮೂಕನಂತೆ ಇರುವುದು. ಈ ರೀತಿ ವೃತ್ತಿಯಿಲ್ಲದೆ ಮೂಕ ನಂತೆ ಬುದ್ಧಿಯು ಇರಬೇಕಾದಲ್ಲಿ. ಧ್ಯಾನದಲ್ಲಿ ಸುಷುಮ್ನಾನಾಡಿಯಲ್ಲಿ ಪ್ರವೇಶಿಸಿ ಅವಿದ್ಯಾಗ್ರಂಥಿಗಳನ್ನೆಲ್ಲಾ ಛಿದ್ರಮಾಡಿ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿದವರಿಗೆ ಸಾಧ್ಯವೇ ಹೊರತು ಇತರರಿಗೆ ಸಾಧ್ಯವಿಲ್ಲ. ಕಾರಣವೇನೆಂದರೆ ಸಾಕ್ಷಾತ್ಕಾರಮಾಡಿ ಕೊಳ್ಳದೇ ಇರುವವರ ಬುದ್ಧಿವೃತ್ತಿಯನ್ನು ಸತತವಾಗಿ ಜಾಗ್ರತ್ಸ್ವಪ್ನ ಸುಷುಪ್ತಿಗಳ ಅವಸ್ಥೆಗಳು ಕಟ್ಟಿಹಾಕಿರುತ್ತವೆ. ಅಂತಃಕರಣವಿರುವುದೂ ಶ್ರೇಷ್ಠ ಸ್ಥಳವಾದ ಶಿರಸ್ಸಿನ ಹೃದಯಾಕಾಶದಲ್ಲಿ. ಯಾವಾಗ ಅಂತಃಕರಣವು ವೃತ್ತಿ ಇಲ್ಲದೆ ಮೂಕನಂತೆ ಶಿರಸ್ಸಿ ನಲ್ಲಿ ಶುದ್ಧವಾದ **ಅಹಂಜ್ಞಾನ**ದೊಡನೆ ನಿಲ್ಲುವುದೋ ಅದು ಈಶ್ವರ ಸೋಪಾನವಾಗಿ ಶ್ರೇಷ್ಠಸ್ಥಾನವಾಗಿದೆ. ಈ ತತ್ವಕ್ಕೆ ವೇದಾಂತಪಂಚದಶಿಯಲ್ಲಿ ಶ್ರೀ ವಿದ್ಯಾರಣ್ಯ ರವರು

**ಜತೇ ತಸ್ಮಿನ್ವೃತ್ತಿ ಶೂನ್ಯಂ ಮನಸ್ತಿಷ್ಠತಿ ಮೂಕವತ್ ।**
**ಏತತ್ಪದಂ ವಸಿಷ್ಠೇನ ರಾಮಾಯ ಬಹುಧೇರಿತಂ ॥**

**ತಾತ್ಪರ್ಯ** :—ಬುದ್ಧಿಯ ವ್ಯಾಪಾರವು ಜಯಿಸಲ್ಪಡುತ್ತಿರಲಾಗಿ ಮೂಗನು ಸಕಲ ವಾಗ್ವ್ಯವಹಾರಗಳನ್ನೂ ಮಾಡಲು ಅಶಕ್ತನಾಗಿರುವಂತೆ ಬುದ್ಧಿಯು ವೃತ್ತಿ

ರೂಪವಾದ ಸಕಲವ್ಯಾಪಾರಗಳನ್ನೂ ಬಿಟ್ಟು ಸುಖವಾಗಿರುವುದು. ಹೀಗೆ ವೃತ್ತಿ ಶೂನ್ಯವಾದ ಬುದ್ಧಿಗೆ ಮೋಕ್ಷಸುಖವುಂಟಾಗಿರುವುದೆಂದು ವಸಿಷ್ಠಋಷಿಗಳಿಂದ ಶ್ರೀರಾಮನಿಗೋಸ್ಕರ ಅನೇಕ ಪ್ರಕಾರಗಳಾಗಿ ಶ್ರೀಮದ್ವಾಸಿಷ್ಠದಲ್ಲಿ ಹೇಳಲ್ಪಟ್ಟಿರುವುದು ಎಂದು ಹೇಳಿರುತ್ತಾರೆ. ವೃತ್ತಿರಾಹಿತ್ಯದಿಂದ ನಿಲುಗಡೆಯಾಗುವ ಬುದ್ಧಿಸ್ಥಿತಿಯನ್ನು ಪಡೆಯುವುದೂ ಮುಕ್ತಸೋಪಾನವೆನ್ನುವ ತಾತ್ಪರ್ಯಕ್ಕೆ ಮಂಡಲ ಬ್ರಾಹ್ಮಣೋಪನಿಷತ್ತಿನಲ್ಲಿ—

**ಅಂತರ್ಲಕ್ಷ್ಯಂ ಜಲಜ್ಯೋತಿ ಸ್ಸ್ವರೂಪಂ ಭವತಿ ।**
**ಮಹರ್ಷಿ ವೇದ್ಯ ಮನ್ತರ್ಬಾಹ್ಯೇಂದ್ರಿಯೈರದೃಶ್ಯಂ ।**
**ಸಹಸ್ರಾರೆ ಜಲಜ್ಯೋತಿ ರನ್ತರ್ಲಕ್ಷ್ಯಂ ಬುದ್ಧಿಗುಹಾಯಾಂ ।**
**ಸರ್ವಾಂಗ ಸುನ್ದರಂ ಪುರುಷರೂಪ ಮನ್ತರ್ಲಕ್ಷ್ಯಂ ಮಿತ್ಯಪರೇ ॥**

**ತಾತ್ಪರ್ಯ॥**—ಅನ್ತರ್ಲಕ್ಷ್ಯವು ಅಮೃತಸ್ವರೂಪವಾಗಿಯೂ ಸ್ವಯಂ ಪ್ರಕಾಶ ಸ್ವರೂಪವಾಗಿಯೂ ಇರುವುದು. ಇದನ್ನು ಮಹರ್ಷಿಗಳು ಸ್ವಾನುಭವದಿಂದ ತಿಳಿದಿರುವರು. ಈ ಅಂತರ್ಲಕ್ಷ್ಯದ ಸ್ಥಿತಿಯು ಬಾಹ್ಯೇಂದ್ರಿಯ ಅಂತರಿಂದ್ರಿಯಗಳಿಂದ ತಿಳಿಯಲು ಸಾಧ್ಯವಿಲ್ಲ. ಸಹಸ್ರಾರಕಮಲವೇ ಜಲಜ್ಯೋತಿ ಸ್ವರೂಪವಾದ ಅನ್ತರ್ಲಕ್ಷ್ಯವೆನಿಸುವುದು. ಬುದ್ಧಿಯ ಗುಹೆಯಲ್ಲಿರುವ ಸರ್ವಾಂಗಸುಂದರನಾದ ಪರಮ ಪುರುಷನ ಸ್ವರೂಪವೂ ಅನ್ತರ್ಲಕ್ಷ್ಯವೆಂದು ಕೆಲವರು ಹೇಳುವರು, ಎಂದು ಹೇಳಿರುವುದು.

ಬುದ್ಧಿಯು ವೃತ್ತಿಯಿಲ್ಲದೆ ಮೂಕನಂತೆ ಶಿರಸ್ಸಿನ ಹೃದಯಾಕಾಶದಲ್ಲಿ ಶುದ್ಧ ಸತ್ವಗುಣಪ್ರಧಾನ ಮಾಯಾಸ್ವರೂಪವಾಗಿ ಆನಂದಮಯವಾಗಿರುವ **'ಅಹಂ'** ಜ್ಞಾನದೊಡನೆ ಇರುವಿಕೆಯು ಈಶ್ವರಸೋಪಾನವಾಗಿ ಶ್ರೇಷ್ಠವಾದ ಸೋಪಾನವೆಂದು ಮೇಲೆ ತಿಳಿಸಿತಷ್ಟೆ! **ಈ ಈಶ್ವರ ಸೋಪಾನವು** ಅನ್ನಮಯಾದಿ ಕೋಶಗಳನ್ನು ದಾಟಿ ಶಿರಸ್ಸಿನ ಹೃದಯಾಕಾಶದದೊಳಗೆ ಇರುವ ಸ್ಥಿತಿಯಾಗಿದೆ. ಈ ಉಪನಿಷತ್ತಿನ ಭೃಗುವಲ್ಲಿಯ ೧೦ನೆಯ ಅನುವಾಕದ"**ಸ ಯ ಏವಂವಿತ್। ಅಸ್ಮಾಲ್ಲೋಕಾತ್ ಪ್ರೇತ್ಯ। ಏತಮನ್ನಮಯಮಾತ್ಮಾನಮುಪಸಂಕ್ರಮ್ಯ।**" ಮುಂತಾಗಿ ಹೇಳುವ ಮಂತ್ರವು ಈಶ್ವರಸೋಪಾನಕ್ಕೆ ಸಂಬಂಧಪಟ್ಟ ಮಂತ್ರವಾಗಿದೆ. ಕಾರಣವೇನೆಂದರೆ ಈ ಮಂತ್ರದ ಅನಂತರ ಜೀವನ್ಮುಕ್ತನು ತಾನು ಕೃತಕೃತ್ಯನಾದೆನೆಂದು ವರ್ಣಿಸುವ ಮಂತ್ರವು ಇದೆ. ಆದುದರಿಂದ ಈಶ್ವರ ಸೋಪಾನಕ್ಕೆ ಸಂಬಂಧಪಟ್ಟ ಮಂತ್ರವಾಗಿದೆ. ಹಿಂದೆ ತಿಳಿಸಿರುವ ಆನಂದವಲ್ಲಿಯ ಈ ವಿಧವಾದ ಮಂತ್ರವು ಸುಷುಮ್ನಾನಾಡಿಯೊಳಗೆ ಐದುಕೋಶಗಳನ್ನು ದಾಟಿ ಹೃದಯಾಕಾಶದಲ್ಲಿ ಪರಬ್ರಹ್ಮಸಾಕ್ಷಾತ್ಕಾರವನ್ನು ಪ್ರತಿಪಾದಿಸುತ್ತೆ.

ಅವರವರ ಪ್ರಾರಬ್ಧಕರ್ಮದಲ್ಲಿರುವ ಜನ್ಮಾಂತರದಲ್ಲಿ ಗಳಿಸಿದ ತತ್ವಜ್ಞಾನದ ಪುಣ್ಯಕ್ಕೆ ಅನುಸಾರವಾಗಿ ಜೀವನ್ಮುಕ್ತರು ದೇಹಪತನದವರೆಗೆ ಈ ಸೋಪಾನದಲ್ಲಿ ವಿಹರಿಸಿಕೊಂಡು ಇರುತ್ತಾರೆ. ಕೆಲವರು ಬಾಹ್ಯವ್ಯಾಪಾರದಲ್ಲೇ ನಿರತರಾಗಿರುತ್ತಾರೆ. ಹೀಗೆ ಬಾಹ್ಯವ್ಯಾಪಾರದಲ್ಲೇ ನಿರತರಾಗಿದ್ದರೂ, ಅಂತರಂಗವಾಗಿ ಬ್ರಹ್ಮಭಾವನೆಯಲ್ಲಿರುತ್ತಾರೆ. ಮಧ್ಯಪಾನಮಾಡಿದವರು ತಮೋಮಿಶ್ರವಾದ ಆನಂದದಲ್ಲಿ ಸಂತೋಷಪಡುತ್ತಾ ಹೇಗಿರುತ್ತಾರೊ ಹಾಗೆ, ಕೆಲವು ಜೀವನ್ಮುಕ್ತರು ಶುದ್ಧಸತ್ವಗುಣದೊಡಗೂಡಿದ ಆನಂದಮಯರಾಗಿ ಬಾಲಕರಂತೆಯೋ ಉನ್ಮತ್ತರಂತೆಯೋ ದಿಗಂಬರರಾಗಿಯೋ ಸಾಂಬರರಾಗಿಯೋ ಸ್ವಪ್ನದಲ್ಲಿನಂತೆ ಈ ಜಗತ್ತನ್ನು ಭಾವಿಸುತ್ತಾ ಇರುತ್ತಾರೆ. ಇಂತಹ ಮಹಾನುಭಾವರಾದ ಜೀವನ್ಮುಕ್ತರು ಬ್ರಹ್ಮಾಮೃತಪಾನದ ಸವಿಯನ್ನು ಬಲ್ಲವರಾದ್ದರಿಂದ ತಾವು ಧನ್ಯರು ಕೃತಕೃತ್ಯರು ಎಂಬ ಭಾವನೆಯಿಂದ ಬ್ರಹ್ಮಾಮೃತದ ಸವಿಯ ಆಶ್ಚರ್ಯವನ್ನು ಗಾನಮಾಡುತ್ತಾ ಇರುತ್ತಾರೆ. ಈ ತತ್ವವನ್ನು ಭೃಗುವಲ್ಲಿಯ ಹತ್ತನೇ ಅನುವಾಕದ "**ಹಾಇವು ಹಾಇವು ಹಾಇವು** ಮುಂತಾಗಿ ಇರುವ ಮಂತ್ರವೂ ಈ ಕೆಳಗೆ ಬರೆದಿರುವ ಶಿಕ್ಷಾವಲ್ಲಿಯ ಹತ್ತನೇ ಅನುವಾಕದ ತ್ರಿಶಂಕುವಿನ ವೇದಾನುವಚನವಾಗಿರುವ ಮಂತ್ರವೂ ಪ್ರತಿಪಾದಿಸುವುವು.

ಶಿಕ್ಷಾವಲ್ಲಿಯ ಹತ್ತನೇ ಅನುವಾಕದ ಮಂತ್ರ.

**ಅಹಂ ವೃಕ್ಷಸ್ಯ ರೇರಿವಾ । ಕೀರ್ತಿಃ ಪೃಷ್ಠಂ ಗಿರೇರಿವ ।**
**ಊರ್ಧ್ವಪವಿತ್ರೋ ವಾಜನೀವ ಸ್ವಮೃತಮಸ್ಮಿ । ದ್ರವಿಣಗ್ಂ**
**ಸವರ್ಚಸಮ್ । ಸುಮೇಧಾ ಅಮೃತೋಕ್ಷಿತಃ । ಇತಿ**
**ತ್ರಿಶಂಕೋರ್ವೇದಾನುವಚನಮ್ ।**

(ಬ್ರಹ್ಮಸ್ವರೂಪವನ್ನು ಪಡೆದುಕೊಂಡು ಬ್ರಹ್ಮಜ್ಞಾನಿಯಾದ ತ್ರಿಶಂಕು ಎಂಬ ಋಷಿಯು ಬ್ರಹ್ಮಾಮೃತಪಾನದ ಸವಿಯಲ್ಲಿ ಮಗ್ನನಾಗಿದ್ದಾಗ ತಾನು ಕೃತಕೃತ್ಯನಾದೆನೆಂಬುದನ್ನು ಹೇಗೆ ವರ್ಣಿಸಿರುವನೆಂದರೆ)

**ಅಹಂ ವೃಕ್ಷಸ್ಯ ರೇರಿವಾ** "ನಾನು ಕತ್ತರಿಸಲ್ಪಟ್ಟು ನಾಶವಾಗುವ ಸಂಸಾರವೆಂಬ ಮರವನ್ನು ಬೆಳೆಯಿಸತಕ್ಕವನು. (ಅಂದರೆ **ಅಹಂ** ಜ್ಞಾನಶಕ್ತಿಯೆ ಅನಿತ್ಯವಾದ ಜಗತ್ತನ್ನು ದೇಹವನ್ನು ಸೃಷ್ಟಿಸಿ ಅದರ ವ್ಯಾಪಾರ ಪ್ರಕಾಶಕವಾಗಿರುವುದೆಂಬ ತತ್ವವಾಗಿರುವುದು.)

"**ಕೀರ್ತಿಃ ಪೃಷ್ಠಂ ಗಿರಿರೇವ**" ನನ್ನ ಕೀರ್ತಿಯು ಬೆಟ್ಟದ ಶಿಖರದಂತೆ ಬಹು

ಉನ್ನತವಾಗಿರುವುದು. (ಅಂದರೆ ಪ್ರಪಂಚದಲ್ಲೆಲ್ಲಾ **'ಅಹಂ'** ಜ್ಞಾನವೇ ಬಹು ಹೆಚ್ಚಿನದಾದ ಮಹತ್ವವಳ್ಳದ್ದೆಂಬ ತತ್ವವಾಗಿರುವುದು.)

**"ಊರ್ಧ್ವಪವಿತ್ರೋವಾಜನೀವ ಸ್ವಮೃತಮಸ್ಮಿ"** ಜ್ಞಾನಸ್ವರೂಪವಾದ ಬ್ರಹ್ಮವೇ ನನಗೆ ಕಾರಣವಾಗಿರುವುದರಿಂದ ನಾನು ಪವಿತ್ರನೆಂದರೆ ಪಾಪರಹಿತನಾಗಿ ಪರಿಶುದ್ಧನಾಗಿರುವೆನು. (ಅಂದರೆ **'ಅಹಂ'** ಜ್ಞಾನಕ್ಕೆ ಕಾರಣವಾದುದು ಬ್ರಹ್ಮವೇ ಆಗಿರುವುದರಿಂದ ಅಹಂ ಜ್ಞಾನವು ಪವಿತ್ರವಾದುದು.)

**"ವಾಜನೀವ ಸ್ವಮೃತಮಸ್ಮಿ"** ಎಂದರೆ ಸೂರ್ಯನಲ್ಲಿ ಅಮೃತವಾದ ಆತ್ಮ ತತ್ವವು ಇರುವುದೆಂದು ಅನೇಕ ಶ್ರುತಿಗಳಲ್ಲಿ ಪ್ರಸಿದ್ಧವಾಗಿರುವಂತೆ ನಾನು ಶುದ್ಧ-ಅಮೃತ ಸ್ವರೂಪನಾಗಿರುವೆನು. (ಅಂದರೆ **'ಅಹಂ'** ಜ್ಞಾನವು ಜನನ ಮರಣಾದಿಗಳಿಲ್ಲದ ಶುದ್ಧಾಮೃತ ಸ್ವರೂಪವಾದುದು.)

**"ದ್ರವಿಣಗ್ಂ ಸವರ್ಚಸಂ"** ಬ್ರಹ್ಮಜ್ಞಾನವು ಮೋಕ್ಷಸುಖಕ್ಕೆ ಕಾರಣವಾದುದರಿಂದ ಥಳಥಳಾಯಮಾನವಾದ ದ್ರವ್ಯದಂತೆ ಇದೆ. (ಅಂದರೆ **'ಅಹಂ'** ಜ್ಞಾನವು ನಿವೃತ್ತಿಮಾರ್ಗಕ್ಕೆ ಕಾರಣವಾದ್ದರಿಂದ ಪೋಷಕರೂಪದಲ್ಲಿರುವುದು.)

**"ಸುಮೇಧಾ ಅಮೃತೋಕ್ಷಿತಃ"** ನಾನು ಸರ್ವಜ್ಞನು, ಕ್ಷೀಣನಾಗದೆ ಇರುವವನು ಮತ್ತು ನಾನು ಅಮೃತದಿಂದ ಅಭಿಷಿಕ್ತನಾದವನು. (ಅಂದರೆ **'ಅಹಂ'** ಜ್ಞಾನವು ಶುದ್ಧಸತ್ವಗುಣಸ್ವರೂಪವಾಗಿ ಅಖಂಡಜ್ಞಾನರೂಪವಾದ್ದರಿಂದ ಸರ್ವಜ್ಞ ಸ್ವರೂಪವಾದುದು, ಕ್ಷಯಿಸತಕ್ಕದ್ದಲ್ಲ ಮತ್ತು ಅಮೃತಸ್ವರೂಪವಾದುದು.)

ಪ್ರತಿಯೊಬ್ಬರೂ **'ನಾನು ನಾನು'** ಎಂದುಕೊಳ್ಳುತ್ತಾರೆ. ನನ್ನ ದೇಹ ಎಂದುಕೊಳ್ಳುತ್ತಾರೆ ಆದರೆ 'ನಾನು' ಎನ್ನುವುದರ ಸ್ವರೂಪವೇನು ಎಂಬುದು ಯಾರಿಗೂ ತಿಳಿಯದು. ಬೂದಿಯು ಕೆಂಡವನ್ನು ಮುಚ್ಚಿರುವಂತೆ 'ನಾನು' ಎನ್ನುವ ಜ್ಞಾನವನ್ನು ಅವಿದ್ಯೆಯು ಮುಚ್ಚಿರುವುದು. ಕೆಂಡದ ಮೇಲಿರುವ ಬೂದಿಯನ್ನು ನಿವೃತ್ತಿ ಮಾಡಿದರೆ ಕೆಂಡವು ಹೇಗೆ ಜಾಜ್ವಲ್ಯಮಾನವಾಗಿ ಕಾಣುವುದೋ ಹಾಗೆಯೆ ಅವಿದ್ಯೆಯ ಉಪಾಧಿಯನ್ನು ಪರಿಹರಿಸಿಕೊಂಡರೆ ತ್ರಿಶಂಕುಋಷಿಯು ಮೇಲೆ ವರ್ಣಿಸಿರುವ ಸ್ಥಿತಿಯನ್ನು ಹೊಂದಿ ಕೃತಕೃತ್ಯರಾಗಬಹುದು.

ಆನಂದವಲ್ಲಿಯಲ್ಲಿ **"ಏತಮನ್ನಮಯಮಾತ್ಮಾನಮುಪಸಂಕ್ರಾಮತಿ"** ಎಂಬದಾಗಿಯೂ, ಭೃಗುವಲ್ಲಿಯಲ್ಲಿ **"ಏತಮನ್ನಮಯಮಾತ್ಮಾನಮುಪಸಂಕ್ರಮ್ಯ"** ಎಂಬದಾಗಿಯೂ ಇದೆ. ಆನಂದವಲ್ಲಿ ಭೃಗುವಲ್ಲಿಗಳಲ್ಲಿರುವ **ಸಂಕ್ರಾಮತಿ, ಸಂಕ್ರಮ್ಯ** ಎಂಬ ಪದಗಳಿಗೆ ಇರುವ ಭೇದವೇನೆಂದರೆ—ಸಂಕ್ರಾಮತಿ ಎಂದರೆ ದಾಟುತ್ತಾನೆ

ಎಂದರ್ಥವಾಗಿ ಕ್ರಿಯೆಯು ಪೂರ್ಣವಾಗಿ ಹಿಂದಿನದಕ್ಕೆ ಸಂಬಂಧವಿಲ್ಲವೆಂದು ಸೂಚಿಸುತ್ತದೆ. ಸಂಕ್ರಮ್ಯ ಎಂದರೆ ದಾಟಿ ಎಂದರ್ಥವಾಗಿ ಹಿಂದಿನದಕ್ಕೆ ಕೊಂಚ ಸಂಬಂಧವನ್ನು ಸೂಚಿಸುತ್ತದೆ. ಇವುಗಳ ಗೂಢವಾದ ತತ್ವವೇನೆಂದರೆ ಸಂಕ್ರಾಮತಿ ಎಂಬುದು ಧ್ಯಾನದಲ್ಲಿ ಸುಷುಮ್ನಾನಾಡಿಯೊಳಗೆ ಐದುಕೋಶಗಳ ಉಪಾಧಿಗಳನ್ನೂ ದಾಟುವ ಎಂದರೆ ಉಪಸಂಹರಿಸಿಕೊಂಡು ಪರಬ್ರಹ್ಮಸ್ಥಿತಿಯನ್ನು ಹೊಂದುವ ತತ್ವವಾಗಿದೆ. ಸುಷುಮ್ನಾನಾಡಿಯೊಳಗಿನ ಮಾರ್ಗದಲ್ಲಿ ಬಹಿರ್ವ್ಯಾಪಾರಕ್ಕೆ ಕೊಂಚವೂ ಅವಕಾಶವಿಲ್ಲದೆ ಬುದ್ಧಿವೃತ್ತಿಯು ತೈಲಧಾರೆಯಂತೆ ಪರಬ್ರಹ್ಮನಲ್ಲಿ ಲೀನವಾಗುತ್ತಿರುತ್ತೆ.

ಭೃಗುವಲ್ಲಿಯಲ್ಲಿ ಇರುವ **ಸಂಕ್ರಮ್ಯ** ಎಂಬುದರ ತತ್ವದಲ್ಲಿ ಬುದ್ಧಿಗೆ ವೃತ್ತಿಯಿಲ್ಲದೆ ಮೂಕನಂತೆ ಶಿರಸ್ಸಿನ ದಹರಾಕಾಶದಲ್ಲಿ ನೆಲೆಸುವ ಈಶ್ವರಸೋಪಾನದಲ್ಲಿ ಸುಷುಮ್ನಾನಾಡಿಯ ಹೊರಪ್ರಾಕಾರದಲ್ಲೇ ಅನ್ನಮಯಾದಿ ಐದು ಕೋಶಗಳನ್ನೂ ದಾಟಿರುವ ಸ್ಥಿತಿಯಾದರೂ, ಜೀವನ್ಮುಕ್ತನು ಬಾಲಕನಂತೆಯೊ ಉನ್ಮತ್ತನಂತೆಯೊ ಅವಧೂತನಾಗಿಯೊ ದೇಹವ್ಯಾಪಾರಕ್ಕೋಸ್ಕರ ಕೋಶಗಳ ಕಾರ್ಯಗಳು ಅವನಲ್ಲಿ ನಡೆಯುತ್ತಿದ್ದರೂ ಅವನ ಬುದ್ಧಿಯು ಐದು ಕೋಶಗಳನ್ನೂ ದಾಟಿದ ಆತ್ಮಾರಾಮವಾಗಿ ಆನಂದಮಗ್ನದ ಸ್ಥಿತಿಯಲ್ಲೇ ಇರುತ್ತದೆ. ಜೀವನ್ಮುಕ್ತನು ತನ್ನ ಕೃತಕೃತ್ಯತೆಯನ್ನು ವರ್ಣಿಸುವಿಕೆಯನ್ನು ಕೆಳಗಿನ ಭೃಗುವಲ್ಲಿಯ ಮಂತ್ರವು ಸಮರ್ಥಿಸುವುದು.

**ಇಮಾಁಲ್ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್ ।**
**ಏತತ್ ಸಾಮಗಾಯನ್ನಾಸ್ತೇ । ಹಾ೩ವು ಹಾ೩ವು ಹಾ೩ವು ।**
**ಅಹಮನ್ನಮಹಮನ್ನಮಹಮನ್ನಮ್ ಅಹಮನ್ನಾದೋ೨ಹ**
**ಮನ್ನಾದೋ೨ಹಮನ್ನಾದಃ । ಅಹಗ್ಂ ಶ್ಲೋಕಕೃದಹಗ್ಂ ಶ್ಲೋ**
**ಕಕೃದಹಗ್ಂ ಶ್ಲೋಕಕೃತ್ । ಅಹಮಸ್ಮಿ ಪ್ರಥಮಜಾ ಋತಾ೨ಸ್ಯ ।**
**ಪೂರ್ವಂ ದೇವೇಭ್ಯೋ ಅಮೃತಸ್ಯ ನಾ೩ಭಾಯಿ । ಯೋ ಮಾ**
**ದದಾತಿ ಸ ಇದೇವಮಾ೩ವಾಃ । ಅಹಮನ್ನ ಮನ್ನಮದನ್ತಮಾ೩**
**ದ್మಿ । ಅಹಂ ವಿಶ್ವಂ ಭುವನಮಭ್ಯ ಭವಾಮ್ । ಸುವರ್ನಜ್ಯೋತೀಃ ।**

**ತಾತ್ಪರ್ಯ** :—ಬ್ರಹ್ಮವನ್ನು ತಿಳಿದುಕೊಂಡವನು ಒಂದೇಸಲ ಬ್ರಹ್ಮಸ್ವರೂಪದಿಂದ ಎಲ್ಲಾ ಕಾಮನೆಗಳನ್ನೂ ಪಡೆದುಕೊಂಡ ಕಾಮರೂಪಿಯಾಗಿ ಸಂಚರಿಸುತ್ತಾ ಮುಂದೆ ತಿಳಿಸುವ ಸಾಮವನ್ನು ಗಾನಮಾಡುತ್ತಿರುವನು. ಆಶ್ಚರ್ಯ ! ಆಶ್ಚರ್ಯ ! ಆಶ್ಚರ್ಯ ! ಆಶ್ರಯ ಆಶ್ರಯಿಗಳೆರಡೂ ನಾನೆ. ಮತ್ತು ಇವುಗಳನ್ನು ಒಟ್ಟುಗೂಡಿಸು

ನವನೂ ನಾನೆ ! ಮತ್ತೊಂದರ ಸಂಪರ್ಕವಿಲ್ಲದ ಆತ್ಮನೇ ನಾನು ! ಎರಡನೆಯ ವಸ್ತುವೆ ಇಲ್ಲದವನು ನಾನು ! ಜಗತ್ತನ್ನು ಸೃಷ್ಟಿಸುವ ಮತ್ತು ಲಯಮಾಡುವ ಜಗದಾದಿಯಲ್ಲಿ ಪ್ರಥಮದಲ್ಲಿ ಹುಟ್ಟಿದ ಈಶ್ವರನೂ ನಾನೆ !

**ಈ** ಮೇಲಿನ ಶ್ರುತಿವಾಕ್ಯದಂತೆ ಈಶ್ವರ ಸ್ಥಿತಿಯಲ್ಲಿರುವ ಮಹಾತ್ಮನು ಆನಂದ ಮಗ್ನತೆಯಲ್ಲೇ ಇದ್ದು ಸರ್ವವೂ ಬ್ರಹ್ಮಸ್ವರೂಪವೆಂದು ತಾನು ಕೃತಾರ್ಥನಾಗಿರುವೆ ನೆಂಬುದನ್ನು ಗಾನಮಾಡುತ್ತಿರಬೇಕಾದರೆ ದೇಹದ ಕೋಶಗಳ ಕಾರ್ಯಗಳು ನಡೆಯಲೇ ಬೇಕು. ಹೀಗಿದ್ದರೂ ಕೋಶಗಳಿಗೆ **ಅ**ತೀತನಾಗಿರುತ್ತಾನೆ. ಈ ತತ್ವವನ್ನು ಶಿಕ್ಷಾವಲ್ಲಿ ಯಲ್ಲಿರುವ ತ್ರಿಶಂಕುಋಷಿಯ ವೇದಾನುವಚನವೂ ಕೂಡ ಸಮರ್ಥಿಸುವುದೆಂತ ಹಿಂದೆಯೇ ತಿಳಿಸಿರುತ್ತೆ. ಆನಂದವಲ್ಲಿಯಲ್ಲಿ ಸಂಕ್ರಾಮತಿ ಮಂತ್ರದನಂತರ ಮುಂದಿನ ಮಂತ್ರವು ಆನಂದರೂಪವಾದ ಪರಬ್ರಹ್ಮಸ್ಥಿತಿಯನ್ನು ಮಾತ್ರ ತಿಳಿಸುತ್ತದೆ. ಭೃಗುವಲ್ಲಿ ಯಲ್ಲಿರುವಂತೆ ಆನಂದವಲ್ಲಿಯಲ್ಲಿ ಜೀವನ್ಮುಕ್ತನು ತನ್ನ ಕೃತಕೃತ್ಯತೆಯನ್ನು ವರ್ಣಿಸಿಲ್ಲ.

ಆದುದರಿಂದ ಭೃಗುವಲ್ಲಿಯಲ್ಲಿ ಹೇಳಿರುವ **'ಸಂಕ್ರಮ್ಯ'** ಎಂಬುವುದರ ತತ್ವವು ಈಶ್ವರಸೋಪಾನಕ್ಕೂ, ಆನಂದವಲ್ಲಿಯಲ್ಲಿರುವ **'ಸಂಕ್ರಾಮತಿ'** ಎಂಬುದರ ತತ್ವವು ಪರಬ್ರಹ್ಮಸೋಪಾನಕ್ಕೂ ನಿಸ್ಸಂದೇಹವಾಗಿ ಸಂಬಂಧಪಟ್ಟವುಗಳಾಗಿ ಇರುವುವು. **ಸಂಕ್ರಾಮತಿ ಸಂಕ್ರಮ್ಯಗಳ** ಭೇದವು ಬಹುಗಹನವಾಗಿಯೂ ಸೂಕ್ಷ್ಮವಾಗಿಯೂ ಇರುವುದು.

# ೧೨ನೆಯ ಪ್ರಕರಣ

## ವಿದೇಹಮುಕ್ತಿ

### ಆನಂದವಲ್ಲಿಯ ಪ್ರಥಮ ಅನುವಾಕದ ಮಂತ್ರ

೧೨ನೇ ಪ್ರಕರಣದಲ್ಲಿರುವ ವಿಷಯಗಳು :— [ಆನಂದವಲ್ಲಿಯ ಪ್ರಥಮ ಮಂತ್ರವಾದ 'ಬ್ರಹ್ಮವಿದಾಪ್ನೋತಿ' ಮಂತ್ರವು ವಿದೇಹಮುಕ್ತಿಯ ತತ್ವವನ್ನೇ ಪ್ರತಿಪಾದಿಸುವುದೆಂಬ ವಿಚಾರ. ವಿದೇಹಮುಕ್ತಿಯಲ್ಲಿ ಓಂಕಾರ ಸಾಕ್ಷಾತ್ಕಾರ, ಅದ್ವೈತಸಿದ್ಧಿ, ನಿರ್ವಿಕಲ್ಪಸಮಾಧಿ, ತುರೀಯಾವಸ್ಥೆ, ರಾಜ ಯೋಗ, ಜೀವನ್ಮುಕ್ತಸ್ಥಿತಿ, ಮುಂತಾದವುಗಳು ಯಾವುವೂ ಇಲ್ಲದ ಜನನ

ಮರಣರಹಿತವಾದುದೆಂದರೆ ಪುನರಾವರ್ತಿಯಿಲ್ಲದ ಅದ್ವಯಸ್ವರೂಪವಾದ ಪರಬ್ರಹ್ಮದಲ್ಲಿ 'ಅಹಂ' ಎಂಬ ಜ್ಞಾನವು ಲಯವಾಗಿ ಪರಬ್ರಹ್ಮವೇ ಆಗು ವುದೆಂದರೆ ಸರ್ವವ್ಯಾಪಕವಾದ ವಿಷ್ಣುಪದದ ರೂಪವೇ ಆಗುವುದೆಂಬ ವಿಚಾರ.]

**ಬ್ರಹ್ಮವಿದಾಪ್ನೋತಿ ಪರಮ್ । ತದೇಷಾಭ್ಯುಕ್ತಾ । ಸತ್ಯಂ ಜ್ಞಾನ ಮನಂತಂ ಬ್ರಹ್ಮ । ಯೋ ವೇದ ನಿಹಿತಂ ಗುಹಾಯಾಂ। ಪರಮೇ ವ್ಯೋಮನ್ । ಸೋಽಶ್ನುತೇ ಸರ್ವಾನ್ ಕಾಮಾನ್ ಸಹ । ಬ್ರಹ್ಮಣಾ ವಿಪಶ್ಚಿತೇತಿ ||೧||**

ಬ್ರಹ್ಮವಿದನು ಪರವನ್ನು ಪಡೆದುಕೊಳ್ಳುತ್ತಾನೆ. ಇಲ್ಲಿ ಇದು ಹೇಳಲ್ಪಟ್ಟಿರು ತ್ತದೆ. ಸತ್ಯವೂ ಜ್ಞಾನವೂ ಅನಂತವೂ ಆದದ್ದು ಬ್ರಹ್ಮವು. ಗುಹೆಯೊಳಗೆ ಪರಮಾ ಕಾಶದೊಳಗೆ ಇರುವ ಅದನ್ನು ಯಾವಾತನು ಹೊಂದುವನೋ ಅವನು ಎಲ್ಲಾ ಕಾಮನೆಗಳನ್ನೂ ಒಟ್ಟಿಗೆ ಸರ್ವಜ್ಞತ್ವವಾದ ಬ್ರಹ್ಮವಾಗಿ ಪಡೆದುಕೊಳ್ಳುತ್ತಾನೆ.

"**ಬ್ರಹ್ಮವಿತ್ ಆಪ್ನೋತಿ ಪರಮ್**" ಎಂಬ ಮೂರು ಪದಗಳಲ್ಲಿ ಬ್ರಹ್ಮವಿತ್ ಎಂದರೆ ಬ್ರಹ್ಮವನ್ನು ಅನುಭವದಿಂದ ಅರಿತಿರುವ ಜೀವನ್ಮುಕ್ತನು, ಪರಮ್ ಎಂದರೆ ನಿರತಿಶಯವಾದುದೆಂದರೆ ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವನ್ನು, ಆಪ್ನೋತಿ ಎಂದರೆ ಹೊಂದುತ್ತಾನೆ ಎಂದು ಅರ್ಥ. ಹಿಂದೆಯೇ ಸಾಧನೆಮಾಡಿ ಅನುಭವದಿಂದ ಬ್ರಹ್ಮವನ್ನು ಅರಿತಿರುವವನಾದ್ದರಿಂದ ಬ್ರಹ್ಮವಿತ್ ಎಂದು ಹೆಸರನ್ನು ಪಡೆದುಕೊಂಡಿದ್ದಾನೆ. ಇಂತಹವನು ಪುನಃ ಪರವನ್ನೆಂದರೆ ಬ್ರಹ್ಮವನ್ನು ಪಡೆಯುವ ನೆಂದು ಏತಕ್ಕೆ ಈ ಮಂತ್ರದಲ್ಲಿ ಹೇಳಿದೆ ? ಎಂಬುದನ್ನು ನಾವು ಸಾವಧಾನದಿಂದ ಯೋಚಿಸಬೇಕು. ಈ ಮಂತ್ರವು ವಿದೇಹಮುಕ್ತಿಯ ತತ್ವವನ್ನೇ ಪ್ರತಿಪಾದಿಸುವುದು. ಬ್ರಹ್ಮಜ್ಞಾನಿಯೆಂದರೆ ಜೀವನ್ಮುಕ್ತನು ಅವನ ದೇಹಪತನಕಾಲದಲ್ಲಿ ಪರಬ್ರಹ್ಮನಾಗು ತ್ತಾನೆಯೆ ಹೊರತು ಮತ್ತಾವುದನ್ನೂ ಹೊಂದುವುದಿಲ್ಲವೆಂಬುದನ್ನು ಈ ಮಂತ್ರವು ಪ್ರತಿಪಾದಿಸುವುದು.

ಆನಂದವಲ್ಲಿಯ ಐದು ಕೋಶಗಳ ವಿಚಾರವನ್ನು ತಿಳಿಸಿದನಂತರ "**ಅಸ್ಮಾ ಲ್ಲೋಕಾತ್ ಪ್ರೇತ್ಯ । ಏತಮನ್ನಮಯಮಾತ್ಮಾನಮುಪಸಂಕ್ರಾಮತಿ ।**" ಎಂಬ ಮಂತ್ರ ಮತ್ತು ಇದರ ಮುಂದಿನ ಮಂತ್ರವಾದ "**ಯತೋವಾಚೋ ನಿವರ್ತಂತೆ ।**" ಮುಂತಾಗಿರುವ ಈ ಎರಡು ಮಂತ್ರಗಳೂ ಜೀವಂತನಾಗಿದ್ದಾಗ ಸಾಧನೆಮಾಡಿ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದುವಿಕೆಯನ್ನು ಪ್ರತಿಪಾಸುವುದೆಂತ

ಜೀವನ್ಮುಕ್ತ ಪ್ರಕರಣದಲ್ಲಿ ತಿಳಿಸಿದೆ. ಅಲ್ಲದೆ ಶಿಕ್ಷಾವಲ್ಲಿಯ ಐದು, ಆರು, ಎಂಟನೆಯ ಅನುವಾಕದ ಮಂತ್ರಗಳಲ್ಲಿ ಸಾಧನಾಕ್ರಮವನ್ನು ತಿಳಿಸಿ ಬ್ರಹ್ಮಸಾಕ್ಷಾತ್ಕಾರದ ಸ್ವರೂಪ ವನ್ನು ತಿಳಿಸಿದೆ. ಆದುದರಿಂದ ಈ "**ಬ್ರಹ್ಮವಿದಾಪ್ನೋತಿ**" ಮಂತ್ರವು ವಿದೇಹ ಮುಕ್ತಿಯ ತತ್ವವನ್ನೇ ಪ್ರತಿಪಾದಿಸುವುದು. ಈ ವಿಚಾರವನ್ನು ಶ್ರೀಶಂಕರಭಗವ ತ್ಪಾದಾಚಾರ್ಯರವರು ಆಸಂದವಲ್ಲಿ ಭಾಷ್ಯದ ಅವತರಣಿಕೆಯಲ್ಲಿ ಹೇಳಿರುವ ಕೆಳಗಿನ ತಾತ್ಪರ್ಯವುಳ್ಳ ವಾಕ್ಯವು ಸಮರ್ಥಿಸುವುದು.

"ಶಿಕ್ಷಾವಲ್ಲಿಯಲ್ಲಿ ಸ್ವಾರಾಜ್ಯವೆಂಬ ಫಲವನ್ನು ಕೊಡುವ ಬ್ರಹ್ಮೋಪಾಸನೆ ಯನ್ನು ಹೇಳಿದ್ದಾಯಿತು. ಆದರೆ ಇಷ್ಟುಮಾತ್ರದಿಂದ ಸಂಸಾರಬೀಜವು ಒಂದಿಷ್ಟು ಉಳಿಯದೆ ನಾಶವಾಗುವುದಿಲ್ಲ. ಆದುದರಿಂದ ಎಲ್ಲಾ ಕಷ್ಟಗಳಿಗೂ ಮೂಲವಾದ ಅಜ್ಞಾನವನ್ನು ನಿವೃತ್ತಿಮಾಡಿಕೊಳ್ಳುವುದಕ್ಕಾಗಿ ಎಲ್ಲಾ ಉಪಾಧಿವಿಶೇಷಗಳನ್ನು ನಿಶ್ಶೇಷವಾಗಿ ತೊಲಗಿಸಿರುವ ಆತ್ಮನನ್ನು ಹೊಂದುವ ಪ್ರಯೋಜನಕ್ಕಾಗಿ "ಬ್ರಹ್ಮ ವಿದಾಪ್ನೋತಿ ಪರಮ್" ಎಂಬ ಮಂತ್ರವನ್ನು ಪ್ರಾರಂಭಿಸಿರುತ್ತೆ."

ಶಿಕ್ಷಾವಲ್ಲಿಯಲ್ಲಿ ಸ್ವಾರಾಜ್ಯವೆಂದರೆ ಜೀವಂತನಾಗಿದ್ದಾಗ ಪರಬ್ರಹ್ಮಸಾಕ್ಷಾತ್ಕಾರ ವನ್ನು ಪಡೆಯುವವಿಚಾರ ಬಂದಿರುವುದು. ಹೀಗೆ ಸಾಕ್ಷಾತ್ಕಾರವಾದರೂ ಆಯುಃ ಪ್ರಮಾಣವಿರುವವರೆಗೆ ಸೃಷ್ಟಿಯಾದ ದೇಹವು ಇರುವುದು- ದೇಹದಸೃಷ್ಟಿ ಮತ್ತು ದೇಹದ ಇರುವಿಕೆಯು ಕಾರಣಶರೀರವೆನಿಸುವ ಮೂಲರೂಪವಾದ ಅಜ್ಞಾನಕ್ಕೆ ಸೇರಿ ದುದು. ವ್ಯಾಪಾರಕ್ಕೆ ಸೃಷ್ಟಿಯು ಮೂಲವಾದ್ದರಿಂದ ಕಾರಣಶರೀರವಾದ ಅಜ್ಞಾನಕ್ಕೆ ಮೂಲಾಜ್ಞಾನವೆಂದು ಹೆಸರು. ಸೃಷ್ಟಿರೂಪವಾದ ಮೂಲಾಜ್ಞಾನ ಮತ್ತು ದೇಹ ಪತನದವರಿಗೆ ಜೀವನ್ಮುಕ್ತನು ಅನುಭವಿಸುವ ಪ್ರಾರಬ್ಧಕರ್ಮರೂಪವಾದ ಉಪಾಧಿ ಗಳು ಜೀವನ್ಮುಕ್ತಸ್ಥಿತಿಯಲ್ಲಿ ಉಳಿದುಕೊಂಡಿರುತ್ತವೆ. ದೇಹಪತನಕಾಲದಲ್ಲಾಗುವ ವಿದೇಹಮುಕ್ತಿಯಲ್ಲೇ ಈ ಉಪಾಧಿಗಳು ನಿಶ್ಶೇಷವಾಗಿ ತೊಲಗುವುದೆಂತಲೂ ಈ ವಿದೇಹಮುಕ್ತಿಯನ್ನೇ "**ಬ್ರಹ್ಮವಿದಾಪ್ನೋತಿ ಪರಮ್**" ಎಂಬ ಮಂತ್ರವು ಪ್ರತಿ ಪಾದಿಸುವುದೆಂಬುದನ್ನೂ ಶ್ರೀಶಂಕರಭಗವತ್ಪಾದಾಚಾರ್ಯರವರ ಭಾಷ್ಯದ ವಾಕ್ಯು ಪ್ರತಿ ಪಾದಿಸುವುದು.

ಅಲ್ಲದೆ ಶ್ರೀಶಂಕರಭಗವತ್ಪಾದಾಚಾರ್ಯರವರು ಮುಂಡಕೋಪನಿಷತ್ತಿನ ಭಾಷ್ಯ ದಲ್ಲಿ "ಜೀವಂತರಾಗಿದ್ದಾಗಲೇ ಬ್ರಹ್ಮಸ್ವರೂಪರಾಗಿದ್ದರೂ, ಘಟಾವರಣವು ಕಳೆದ ಬಳಿಕ ಘಟದೊಳಗಿನ ಆಕಾಶವು ಮಹಾಕಾಶವನ್ನು ಒಂದಾಗುವ ಹಾಗೆ ಜೀವನ್ಮುಕ್ತರು ಶರೀರಪಾತಾನಂತರದಲ್ಲಿ ಬ್ರಹ್ಮಭೂತರಾಗಿ ಪರಮಾತ್ಮಸ್ವರೂಪರಾಗುವುದರಿಂದ ಸಂಪೂರ್ಣವಾದ ಬಂಧನಿವೃತ್ತಿಯನ್ನು ಪಡೆಯುವರು." ಎಂದು ಹೇಳಿರುವ ವಾಕ್ಯೂ

ಮತ್ತು ಇಲ್ಲಿ ಬರೆದಿರುವ "**ಬ್ರಹ್ಮವಿದಾಪ್ನೋತಿ ಪರಮ್**" ಮತ್ತು "**ಸೋಽಶ್ನುತೇ ಸರ್ವಾನ್ಕಾಮಾನ್ ಸಹ**" ಎಂಬ ಮಂತ್ರಗಳ ತತ್ವಗಳಿಂದಲೂ "**ಬ್ರಹ್ಮವಿದಾಪ್ನೋತಿ**" ಮಂತ್ರವು ನಿಸ್ಸಂದೇಹವಾಗಿ ವಿದೇಹಮುಕ್ತಿಯ ತತ್ವವನ್ನೇ ಪ್ರತಿಪಾದಿಸುವುದು.

ಈ ಮೇಲಿನ ತತ್ವಸಮರ್ಥನೆಗೆ ಅನುಸಾರವಾಗಿ ಜೀವನು ಮರಣೋನ್ಮುಖನಾಗುವ ಕಾಲದಲ್ಲೂ, ನಂತರ ಶವಸಂಸ್ಕಾರದಲ್ಲೂ "**ಬ್ರಹ್ಮವಿದಾಪ್ನೋತಿ ಪರಮ್**" ಎಂಬ ಈ ಮಂತ್ರವನ್ನು ಮರಣವನ್ನು ಹೊಂದಿದವನು ವಿದೇಹಮುಕ್ತಿಯನ್ನು ಪಡೆಯುವ ಸಂಸ್ಕಾರಕ್ಕಾಗಿ ಕರ್ಣದಲ್ಲಿ ಪಠಿಸುವುದು ಅಪರಕರ್ಮದಲ್ಲಿ ರೂಢಿಯಲ್ಲಿ ಇರುತ್ತೆ. ಆದುದರಿಂದ ಈ ಮಂತ್ರವು ವಿದೇಹಮುಕ್ತಿಯ ತತ್ವವನ್ನೇ ಪ್ರತಿಪಾದಿಸುವುದು.

ಜೀವನ್ಮುಕ್ತನು ದೇಹದ ಯಾವಸ್ಥಳದಲ್ಲಿ ವಿದೇಹಮುಕ್ತಿಯನ್ನು ಪಡೆದುಕೊಳ್ಳುತ್ತಾನೆಂದರೆ—ವಿದೇಹಮುಕ್ತಿಯನ್ನು ಪಡೆಯಲು ಜೀವನ್ಮುಕ್ತನು ತನ್ನ ದೇಹದಿಂದ ಹೊರಕ್ಕೆ ಎಲ್ಲೂ ಹೋಗಬೇಕಾದ್ದಿಲ್ಲ. ಶಿರಸ್ಸಿನಲ್ಲಿರುವ ಹೃದಯಾಕಾಶವೆನಿಸುವ ಗುಹೆಯಲ್ಲಿಯೇ ಜೀವಾತ್ಮನು ಪರಮಾತ್ಮನಾಗುತ್ತಾನೆ. ಶಿರಸ್ಸಿನಲ್ಲಿರುವ ಹೃದಯಾಕಾಶವೆನಿಸುವ ಗುಹೆಯ ವಿಚಾರವನ್ನು ಹಿಂದೆ ವ್ಯಾಹೃತಿಗಳ ತತ್ವದಲ್ಲಿಯೇ ವಿವರಿಸಿದೆ. ದೇಹದಲ್ಲಿಯೇ ಜೀವಾತ್ಮನು ಪರಮಾತ್ಮನಾಗುತ್ತಾನೆಂದು ಮೇಲೆ ತಿಳಿಸಿದ ತತ್ವವನ್ನು ಛಾಂದೋಗ್ಯೋಪನಿಷತ್ತಿನ ವಾಕ್ಯವೂ ಸಮರ್ಥಿಸುವುದು.

**"ನತಸ್ಯಪ್ರಾಣಾ ಉತ್ಕ್ರಾಮಂತ್ಯತ್ರೈವ ಸ**
**ಮವಲೀಯಂತೇ ಬ್ರಹ್ಮೈವಸನ್ ಬ್ರಹ್ಮಾಪ್ಯೇತಿ॥"**

**ತಾತ್ಪರ್ಯ** :—ಮರಣಕಾಲದಲ್ಲಿ ಅಜ್ಞಾನಿಗಳ ಜೀವವು ಈ ಶರೀರದಿಂದ ಉತ್ಕ್ರಮಣವನ್ನು ಹೊಂದುವಂತೆ ತತ್ವಜ್ಞಾನಿಯ ಜೀವವು ಈ ಶರೀರದಿಂದ ಹೊರಗೆ ಹೋಗುವುದಿಲ್ಲವೆಂತಲೂ ಜೀವವು ಶರೀರದ ಹೃದಯಾಕಾಶದಲ್ಲಿಯೇ ಲಯವಾಗಿ ಬ್ರಹ್ಮರೂಪವಾಗುವುದೆಂತಲೂ ಹೇಳಿದೆ.

**ಶುದ್ಧವಾದ 'ಅಹಂ' ಜ್ಞಾನವೇ ಜೀವ.** ಬುದ್ಧಿಯಲ್ಲಿರುವ ಪರಮಾತ್ಮನ ಪ್ರತಿಫಲಿತ **ಚೈತನ್ಯವೇ ಆತ್ಮ.** ಜೀವಾತ್ಮನೆಂದರೆ ಶುದ್ಧವಾದ **ಅಹಂ** ಜ್ಞಾನದೊಡಗೂಡಿದ ಪ್ರತಿಫಲಿತ ಚೈತನ್ಯ. ವಿದೇಹಮುಕ್ತಿಯಲ್ಲಿ ದೇವತಾತ್ಮಕವಾದ ಜ್ಞಾನಶಕ್ತಿಯೆಂದರೆ ಶುದ್ಧಸತ್ವಗುಣ ಸ್ವರೂಪವಾದ **'ಅಹಂ'** ಜ್ಞಾನವು ದೇಹವನ್ನು ಧರಿಸಿಕೊಂಡಿದ್ದ "ವಿಸರ್ಗ (ಅಃ)" ಶಕ್ತಿಯಾದ **ಶ್ರೀ ಕುಂಡಲಿನೀಶಕ್ತಿಯನ್ನೂ ಕಲಾಶಕ್ತಿಗಳಾದ** ಅಕ್ಷರಶಕ್ತಿಗಳನ್ನೂ ತನ್ನಲ್ಲಿ ಅಡಗಿಸಿಕೊಂಡು **ಸುಷುಮ್ನಾನಾಡಿಯ** ಮೂಲಕ ಶಿರಸ್ಸಿನಲ್ಲಿರುವ ಹೃದಯಾಕಾಶದ ಬ್ರಹ್ಮರೂಪದಲ್ಲಿ

**ಸಂಪೂರ್ಣಲಯವನ್ನು ಹೊಂದಿ ಬ್ರಹ್ಮರೂಪನೇ ಆಗುವುದು.** ಮುಕ್ತಿಕೋಪ ನಿಷತ್ತಿನಲ್ಲಿ.

**ದ್ವಿವಿಧಶ್ಚಿತ್ತನಾಶೋಽಸ್ತಿ ಸರೂಪೋಽರೂಪ ಏವಚ ।**
**ಜೀವನ್ಮುಕ್ತಾ ಸರೂಪಾಸ್ಯಾ ದರೂಪಾ ದೇಹಮುಕ್ತಿಗಃ ॥**

**ತಾತ್ಪರ್ಯ :**—ಅಂತಃಕರಣದ ನಾಶವು ಸರೂಪ ಮತ್ತು ಅರೂಪವೆಂದು ಎರಡು ವಿಧ. ಜೀವನ್ಮುಕ್ತಿಯಲ್ಲಿ ರೂಪಸಹಿತವಾಗಿ ಬ್ರಹ್ಮಾಕಾರವಾಗುವುದು. ವಿದೇಹಮುಕ್ತಿಯಲ್ಲಿ ರೂಪರಹಿತವಾಗುವುದು ಎಂದು ಹೇಳಿದೆ. ಆದುದರಿಂದ ವಿದೇಹ ಮುಕ್ತಿಯಲ್ಲಿ ಅಂತಃಕರಣವು ರೂಪರಹಿತವಾಗುವುದರಿಂದ ಅಂತಃಕರಣದಲ್ಲಿದ್ದ ಪರಮಾತ್ಮನ ಪ್ರತಿಫಲಿತಚೈತನ್ಯನಾದ ಆತ್ಮನು, ರಸಕನ್ನಡಿಯು ನಾಶವಾದರೆ ಪ್ರತಿಫಲನ ಬೆಳಕೆಂಬುದೇ ಹೇಗೆ ಇರುವುದಿಲ್ಲವೊ ಹಾಗೆ, ತನ್ನ ನಿಜವಾದ ಸ್ವಯಂ ಪ್ರಕಾಶಸ್ವರೂಪವಾದ ಪರಬ್ರಹ್ಮನೇ ಆಗುವನು. ವಿದೇಹಮುಕ್ತಿಯಲ್ಲಿ ಸೂಕ್ಷ್ಮ ಶರೀರದ ಬಲೆಯು ಛಿದ್ರವಾಗುವುದರಿಂದಲೂ ಉತ್ಕ್ರಮಣವಿಲ್ಲದಿರುವುದರಿಂದಲೂ ದೇಹದಲ್ಲಿದ್ದ ಇಂದ್ರಿಯ ಶಕ್ತಿಗಳು ತಮ್ಮ ತಮ್ಮ ಮೂಲಕಾರಣವಾದ ದೇವತಾಶಕ್ತಿ ಗಳಲ್ಲಿ ಸೇರಿಹೋಗುವುವು, ಎಂದು ಮುಂಡಕೋಪನಿಷತ್ತಿನಲ್ಲಿ ಹೇಳಿರುತ್ತೆ.

ಮಂತ್ರದಲ್ಲಿನ "**ಸೋಽಶ್ನುತೇ ಸರ್ವಾನ್ ಕಾಮಾನ್ ಸಹ । ಬ್ರಹ್ಮಣಾ ವಿಪಶ್ಚಿತೇತಿ ।**" ಎಂಬುದರ ತತ್ವವೇನೆಂದರೆ—ಈ ಸ್ಥಿತಿಯಲ್ಲಿ ಸರ್ವಜ್ಞವಾದ ಪರಬ್ರಹ್ಮ ಹೊರತು ಎರಡನೆಯದು ಯಾವುದೂ ಇರುವುದಿಲ್ಲ. ಸರ್ವಜ್ಞ ಎಂದರೆ ಎರಡನೆಯದರ ಜ್ಞಾನಕ್ಕೆ ಅವಕಾಶವೇ ಇಲ್ಲದೆ ಅಂದರೆ ಆದ್ಯಂತಗಳಿಲ್ಲದೆ ಅಖಂಡ ಜ್ಞಾನರೂಪವೇ ಸರ್ವಜ್ಞ ಎನಿಸಿಕೊಳ್ಳುವುದು. ಇಂತಹ ಸರ್ವಜ್ಞರೂಪವಾದ ಬ್ರಹ್ಮವೇ ಇವನಾಗಿರುವುದರಿಂದ ಎಲ್ಲಾ ಕಾಮನೆಗಳನ್ನೂ ಪಡೆದುಕೊಂಡಂತಾಗುತ್ತೆ. ಅವಿದ್ಯಾ ರೂಪವಾದ ಸರ್ವಕಾಮನೆಗಳನ್ನೂ ತ್ಯಜಿಸಿದ್ದರಿಂದ ಸರ್ವಕಾಮನಾರೂಪವಾದ ಸರ್ವಜ್ಞ ರೂಪವಾದ ಪರಬ್ರಹ್ಮನಾದನು.

ಜೀವಂತನಾಗಿದ್ದಾಗ ಮೋಕ್ಷವನ್ನು ಪಡೆದರೆ ದೇಹವಿರುವುದರಿಂದ ಈ ಮೋಕ್ಷದ ಸ್ಥಿತಿಯು ಬ್ರಹ್ಮಸಾಕ್ಷಾತ್ಕಾರ, ನಿರ್ವಿಕಲ್ಪಸಮಾಧಿ, ಓಂಕಾರ, ತುರೀಯ ಸ್ವಾರಾಜ್ಯ, ರಾಜಯೋಗ ಮುಂತಾದ ಹೆಸರುಗಳಿಂದ ಕರೆಯಲ್ಪಡುವುದು. ಘಟವೇ ಒಡೆದು ಹೋದರೆ ಘಟದ ಆಕಾಶ ಮಹಾಕಾಶಗಳೆಂಬ ವ್ಯವಹಾರಕ್ಕೆ ಅವಕಾಶವಿಲ್ಲದೆ ಎಲ್ಲಾ ಮಹಾಕಾಶವೆನಿಸುವುದೊ, ಅದರಂತೆ ವಿದೇಹಮುಕ್ತಿಯಲ್ಲಿ ನಾನು ಎಂಬ ಜ್ಞಾನವೂ ಮತ್ತು ಜೀವಾತ್ಮನೂ ಸರ್ವವ್ಯಾಪಿಯಾದ ಬ್ರಹ್ಮರೂಪವಾಗುವರು. ಇಂತಹ ಸ್ಥಿತಿಯನ್ನು ಪಡೆದವರಿಗೆ "ನ ಚ ಪುನರಾವರ್ತತೆ ನ ಚ ಪುನರಾವರ್ತತೆ" ಎಂಬ ಶ್ರುತಿ ಪ್ರಮಾಣದಂತೆ ಪುನರ್ಜನ್ಮವಿಲ್ಲ ಪುನರ್ಜನ್ಮವಿಲ್ಲ.

# ೧೩ನೆಯ ಪ್ರಕರಣ

## ಶಿಕ್ಷಾವಲ್ಲಿಯ ೯ನೇ ಅನುವಾಕದ ಮಂತ್ರ

### ಅಧ್ಯಯನ ಪ್ರವಚನಗಳ ಅತ್ಯವಶ್ಯಕತೆಯ ವಿಚಾರ

೧೩ನೆಯ ಪ್ರಕರಣದಲ್ಲಿರುವ ವಿಷಯಗಳು :—[ಈ ಅನುವಾಕದ ಮಂತ್ರದ ಅರ್ಥವು ಕರ್ಮಕಾಂಡಕ್ಕೆ ಅನುಸಾರವಾಗಿ ವೇದವನ್ನು ಅಧ್ಯಯನ ಮಾಡು ಇತರರಿಗೂ ಹೇಳಿಕೊಡು ಎಂದು ಸೂಚಿಸಿದರೂ ಜ್ಞಾನಕಾಂಡದಂತೆ ವೇದಾರ್ಥವೆನಿಸುವ ಆತ್ಮತತ್ವವನ್ನು ತಿಳಿದುಕೊ ಇನ್ನೊಬ್ಬರಿಗೆ ಬೋಧಿಸು ಎಂಬ ಅರ್ಥವೂ ಆಗುವುದೆಂಬುದರ ವಿವರಣೆ. ಸತ್ಯ ಎಂಬ ಪದವು ಆತ್ಮ ತತ್ವಾನುಸಂಧಾನವನ್ನೂ, ತಪಸ್ಸೆಂಬ ಪದವು ಧ್ಯಾನಯೋಗಾನುಷ್ಠಾನದ ತತ್ವವನ್ನೂ, ಅಧ್ಯಯನಪ್ರವಚನಗಳು ಅತ್ಮತತ್ವವನ್ನು ತಿಳಿದುಕೊ ಎಂಬು ವನ್ನೂ ಪ್ರತಿಪಾದಿಸುವುವೆಂತಲೂ, ಸತ್ಯ ತಪಸ್ಸು ಆತ್ಮತತ್ವದ ವಿಚಾರ ಈ ಮೂರೂ ಒಟ್ಟುಗೂಡಿಯೇ ಪರಮಾತ್ಮಸಾಕ್ಷಾತ್ಕಾರವನ್ನು ಉಂಟುಮಾಡುವು ದೆಂತಲೂ ತಿಳಿಸುವ ವಿಚಾರದ ವಿವರಣೆ ]

ಋತಂ ಚ ಸ್ವಾಧ್ಯಾಯಪ್ರವಚನೇ ಚ। ಸತ್ಯಂ ಚ ಸ್ವಾಧ್ಯಾಯಪ್ರ ವಚನೇ ಚ । ತಪಶ್ಚ ಸ್ವಾಧ್ಯಾಯಪ್ರವಚನೇ ಚ । ದಮಶ್ಚ ಸ್ವಾಧ್ಯಾಯಪ್ರವಚನೇ ಚ । ಶಮಶ್ಚ ಸ್ವಾಧ್ಯಾಯಪ್ರವಚನೇ ಚ। ಅಗ್ನಯಶ್ಚ ಸ್ವಾಧ್ಯಾಯಪ್ರವಚನೇ ಚ । ಅಗ್ನಿಹೋತ್ರಂ ಚ ಸ್ವಾಧ್ಯಾಯಪ್ರವಚನೇ ಚ । ಅತಿಥಯಶ್ಚ ಸ್ವಾಧ್ಯಾಯಪ್ರವ ಚನೇ ಚ । ಮಾನುಷಾಂ ಚ ಸ್ವಾಧ್ಯಾಯಪ್ರವ ಚನೇ ಚ । ಪ್ರಜಾ ಚ ಸ್ವಾಧ್ಯಾಯಪ್ರವಚನೇ ಚ । ಪ್ರಜನಶ್ಚ ಸ್ವಾಧ್ಯಾಯ ಪ್ರವಚನೇ ಚ । ಪ್ರಜಾತಿಶ್ಚ ಸ್ವಾಧ್ಯಾಯಪ್ರವಚನೇ ಚ । ಸತ್ಯಮಿತಿ ಸತ್ಯವಚಾರಾ ಥೀತರಃ । ತಪ ಇತಿ ತಪೋ ನಿತ್ಯಃ ಪೌರುಶಿಷ್ಟಿಃ । ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ । ತದ್ಧಿ ತಪಸ್ತದ್ಧಿ ತಪಃ ।

(೧) ಈ ಮಂತ್ರದಲ್ಲಿರುವ '**ಋತ**' ಎಂಬ ಪದಕ್ಕೆ ಶಾಸ್ತ್ರದಲ್ಲಿ ತಿಳಿಸಿರುವಂತೆ ಆಚರಿಸಿಸಬೇಕೆಂದು ಬುದ್ಧಿಯಲ್ಲಿ ಚೆನ್ನಾಗಿ ನಿಶ್ಚಯವಾಗಿರುವ ಅರ್ಥಕ್ಕೆ ಋತ ಎಂದು ಹೆಸರು. ಅಲ್ಲದೆ ಋತ ಎಂದರೆ ಸರಳತೆ ಎಂದು ಅರ್ಥವಾಗುವುದು. ಇಂತಹ ಋತ ದೊಡಗೂಡಿದ್ದರೂ, (೨) '**ಸತ್ಯ**' ಎಂಬ ಪದಕ್ಕೆ ಯಥಾರ್ಥವಾದುದನ್ನು ವಾಕ್ಕಿ ನಿಂದ ನುಡಿಯುವಿಕೆ ಮತ್ತು ಶರೀರದಿಂದ ಕಾರ್ಯಮಾಡುವಿಕೆಗೂ ಪರಮಾತ್ಮನನ್ನು ಹೊಂದುವ ಮಾರ್ಗದಲ್ಲಿ ಇರುವಿಕೆಗೂ ಸತ್ಯಪದವು ಅನ್ವಯವಾಗುವುದು. ಇಂತಹ ಸತ್ಯದೊಡಗೂಡಿದ್ದರೂ, (೩) **ತಪಶ್ಶಬ್ದಕ್ಕೆ** ಕೃಚ್ಛ್ರಚಾಂದ್ರಾಯಣಾದಿ ವ್ರತಗಳನ್ನು ಆಚರಿಸುವಿಕೆಗೂ, ಧ್ಯಾನಮಾಡುವಿಕೆಗೂ ತಪಸ್ಸೆನ್ನಲ್ಪಡುವುದು. ಇಂತಹ ತಪಸ್ಸೊಡ ಗೂಡಿದ್ದರೂ, (೪) **ದಮವೆಂದರೆ** ಬಾಹ್ಯೇಂದ್ರಿಯಗಳನ್ನು ಅಂತರ್ಮುಖಕ್ಕೆ ತಿರುಗಿಸಿ ಕೊಳ್ಳುವಿಕೆಗೆ ದಮವೆಂದು ಹೆಸರು. ಇಂತಹ ದಮದಿಂದ ಕೂಡಿದ್ದರೂ, (೫) **ಶಮ ವೆಂದರೆ** ಅಂತಃಕರಣವನ್ನು ಸಮಾಧಾನಸ್ಥಿತಿಯಲ್ಲಿ ನಿಲ್ಲಿಸುವಿಕೆಗೆ ಶಮವೆಂದು ಹೆಸರು. ಈ ಶಮಸ್ಥಿತಿಯಲ್ಲಿದ್ದರೂ, (೬) ಅಗ್ನಿಯನ್ನು ಆದಾನಮಾಡುತ್ತಿದ್ದರೂ, (೭) ಅಗ್ನಿ ಯಲ್ಲಿ ಹೋಮಮಾಡುತ್ತಿದ್ದರೂ, (೮) ಅತಿಥಿಗಳನ್ನು ಸತ್ಕರಿಸುತ್ತಿದ್ದರೂ, (೯) ಮಾನುಷಂಚ ಎಂದರೆ ಲೋಕವ್ಯವಹಾರವನ್ನು ಪ್ರಾಪ್ತವಾದಂತೆ ಮಾಡುತ್ತಿದ್ದರೂ, (೧೦) ಬಂಧುಮಿತ್ರರ ಕಾರ್ಯದಲ್ಲಿದ್ದರೂ, (೧೧) ಪುತ್ರೋತ್ಪತ್ತಿಯನ್ನುಮಾಡುವ ಯತ್ನದಲ್ಲಿದ್ದರೂ, (೧೨) ಮೊಮ್ಮಗನನ್ನು ಪಡೆಯಲು ಮಗನಿಗೆ ವಿವಾಹಮಾಡುವ ಕಾರ್ಯದಲ್ಲಿದ್ದರೂ, ಅಂದರೆ ಮೇಲೆ ಹೇಳಿದ ಹನ್ನೆರಡು ವಿಧವಾದ ಕಾರ್ಯಗಳಲ್ಲಿ ಯಾವುದರಲ್ಲಿ ಒಡಗೂಡಿದ್ದರೂ ಅಧ್ಯಯನ ಪ್ರವಚನಗಳನ್ನು ಪ್ರಯತ್ನಪೂರ್ವಕವಾಗಿ ಮಾಡುತ್ತಿರಬೇಕೆಂಬುದೆ ಮೇಲಿನ ಮಂತ್ರದ ಅರ್ಥವು.

ಈ ಅನುವಾಕದ ಮಂತ್ರಕ್ಕೆ ಕರ್ಮಜ್ಞಾನಗಳೆರಡರ ಪರವಾಗಿಯೂ ಅರ್ಥಮಾಡ ಬಹುದು. ಅಂದರೆ ಸ್ಥೂಲವಾಗಿ ನೋಡಿದರೆ ಕರ್ಮಪರವಾಗಿದೆ. ಗೂಢವಾಗಿ ಜ್ಞಾನ ಪರವಾಗಿಯೂ ಇದೆ. ಈ ಅನುವಾಕದ ಮಂತ್ರದಲ್ಲಿ ಅಧ್ಯಯನ ಪ್ರವಚನಗಳೆರಡನ್ನೂ ಜೊತೆಯಲ್ಲಿಯೆ ಹೇಳಿದೆ. ಅಧ್ಯಯನವೆಂದರೆ ತಾನು ಕಲಿಯುವಿಕೆ. ಪ್ರವಚನ ವೆಂದರೆ ಇನ್ನೊಬ್ಬರಿಗೆ ಕಲಿಸುವಿಕೆ. ತಾನು ಚೆನ್ನಾಗಿ ಕಲಿಯದೆ ಮತ್ತೊಬ್ಬರಿಗೆ ಕಲಿಸಲು ಸಾಧ್ಯವಿಲ್ಲ. ಅಧ್ಯಯನ ಪ್ರವಚನಗಳೆರಡೂ ಈ ಅನುವಾಕದಲ್ಲಿ ಜೊತೆ ಯಲ್ಲೇ ಇರುವುದರಿಂದ ಪ್ರಥಮದಲ್ಲಿ ಗುರುವಿನಲ್ಲಿ ಕಲಿತಿರತಕ್ಕವನಿಗೇ ಈ ಅನುವಾಕದ ಮಂತ್ರವು ಅನ್ವಯಿಸುತ್ತೆಂತ ಹೇಳಬೇಕಾಗಿದೆ. ಈ ವಿಚಾರದ ಸಮರ್ಥನೆಗೆ ಇದೇ ಶಿಕ್ಷಾವಲ್ಲಿಯ ೨ನೇ ಅನುವಾಕದ "**ಓಂ ಶೀಕ್ಷಾಂ ವ್ಯಾಖ್ಯಾ ಸ್ಯಾಮಃ**" ಎಂಬ ಮಂತ್ರದಲ್ಲೂ ಮತ್ತು ೩ನೇ ಅನುವಾಕದ "**ಸಹ ನೌ ಯಶಃ। ಸಹ ನೌ ಬ್ರಹ್ಮವರ್ಚಸಮ್। ಅಥಾತಃ ಸಗ್ಂಹಿತಾಯಾ ಉಪನಿಷದಂ ವ್ಯಾಖ್ಯಾಸ್ಯಾಮಃ।**" ಎಂಬ ಮಂತ್ರದಲ್ಲೂ ಗುರುಕುಲವಾಸಕ್ಕೆ ಬಂದ ಶಿಷ್ಯನಿಗೆ

ವೇದಾಧ್ಯಯನದ ಪ್ರಾರಂಭಿಸುವಿಕೆಯು ವಿಚಾರವು ಬಂದೇ ಇರುವುದರಿಂದ ಈ ಅನುವಾಕದಲ್ಲಿ ತಿಳಿಸುವ ಅಧ್ಯಯನಪದಕ್ಕೆ ಹಿಂದೆ ಗುರುಕುಲವಾಸದಲ್ಲಿ ಮಾಡಿದು ದನ್ನು ಮರೆಯದಿರುವುದಕ್ಕೋಸ್ಕರ ಪುನರಾವರ್ತಿಮಾಡುತ್ತಿರಬೇಕೆಂಬುದನ್ನೇ ಪ್ರತಿ ಪಾದಿಸುವುದು. ಇನ್ನೊಬ್ಬರಿಗೆ ಕಲಿಸುವಿಕೆಯೂ ಪುನರಾವರ್ತಿ ಎನಿಸುವುದು,

ಈ ಅನುವಾಕದ ಮಂತ್ರದ ಅರ್ಥವನ್ನು ಕರ್ಮಕಾಂಡಕ್ಕೆ ಅನುಸಾರವಾಗಿ ಮೇಲೆ ತಿಳಿಸಿತು. ಜ್ಞಾನಕಾಂಡಕ್ಕೆ ಅನುಸಾರವಾದ ಅರ್ಥವನ್ನು ತಿಳಿಸೋಣ. ಆತ್ಮಸಾಕ್ಷಾ ತ್ಕಾರಕ್ಕೆ ಸಾಧನವಾಗಿ ಗುರುವಿನಿಂದ ಪ್ರಥಮದಲ್ಲಿ ಆತ್ಮತತ್ವವನ್ನು ಶ್ರವಣಮಾಡು ವಿಕೆಯು ಸಹ ಅಧ್ಯಯನವೆನಿಸುವುದು. ಆತ್ಮತತ್ವವನ್ನು ತಾನು ಚೆನ್ನಾಗಿ ತಿಳಿದು ಕೊಳ್ಳದೆ ಮತ್ತೊಬ್ಬರಿಗೆ ಬೋಧಿಸಲು ಸಾಧ್ಯವಿಲ್ಲ. ಈ ಅನುವಾಕದ ಮಂತ್ರದಲ್ಲಿ ಅಧ್ಯಯನದ ಜೊತೆಗೆ ಪ್ರವಚನವೂ ಇರುವುದರಿಂದ ಪ್ರಥಮದಲ್ಲಿ ಗುರುವಿನಲ್ಲಿ ಆತ್ಮ ತತ್ವವನ್ನು ಶ್ರವಣಮಾಡಿರಲೇಬೇಕು. ಇದಕ್ಕೆ ಅನುಸಾರವಾಗಿ ಶಿಕ್ಷಾವಲ್ಲಿಯ ೫ನೇ ಅನುವಾಕದ "**ಭೂರ್ಭುವಃ ಸುವರಿತಿ ವಾ ಏತಾಸ್ತಿಸ್ರೋ ವ್ಯಾಹೃತಯಃ**" ಎಂಬ ಮಂತ್ರವು ಆತ್ಮತತ್ವದ ಶ್ರವಣಮಾಡುವಿಕೆಯನ್ನೇ ಪ್ರತಿಪಾದಿಸುವುದು. ಅಲ್ಲದೆ ೬ನೇ ಅನುವಾಕದ "**ಸ ಯ ಏಷೋಽನ್ತರ್ಹೃದಯ ಆಕಾಶಃ**" ಎಂಬ ಮಂತ್ರವು ಅನುಷ್ಠಾನದ ವಿಚಾರವನ್ನು ತಿಳಿಸಿ ಆತ್ಮಸಾಕ್ಷಾತ್ಕಾರವಾಗುವಿಕೆಯನ್ನು ತಿಳಿಸುವುದು. ಆದುದರಿಂದ ೯ನೇ ಅನುವಾಕದ ಮಂತ್ರವು ಹಿಂದೆ ಗುರುವಿನಿಂದ ತಿಳಿದುಕೊಂಡಿದ್ದ ಆತ್ಮತತ್ವವನ್ನು ಪುನರಾವರ್ತಿಮಾಡುವಿಕೆಗೇ ಸೇರಿದುದಾಗಿದೆ. ಇನ್ನೊಬ್ಬರಿಗೆ ಬೋಧಿಸುವಿಕೆಯಿಂದಲೂ ಆತ್ಮತತ್ವವನ್ನು ಪುನರಾವರ್ತಿಮಾಡಿಕೊಂಡಂತಾಗುವುದು.

ಗುರುಕುಲವಾಸದಲ್ಲಿ ಕಂಠಪಾಠಮಾಡಿದ್ದ ವೇದಾಧ್ಯಯನವು ಪುನರಾವರ್ತಿ ಮಾಡ ದಿದ್ದರೆ ಮರೆತುಹೋಗುವುದು. ಆದುದರಿಂದ ಅದು ದೃಢವಾಗಿ ನಿಲ್ಲುವವರೆಗೆ ಪುನರಾ ವರ್ತಿಮಾಡುತ್ತಲೇ ಇರಬೇಕು. ಇನ್ನೊಬ್ಬರಿಗೆ ಕಲಿಸುವುದರಿಂದಲೂ ದೃಢವಾಗುವುದು. ಉಪನಿಷತ್ತುಗಳು ವೇದವೇ ಆಗಿದೆ. ವೇದಮಂತ್ರಗಳು ದೃಢವಾಗಿ ನಿಲ್ಲುವುದರಿಂದ ಯಾವ ಯಾವ ಮಂತ್ರಗಳೂ ಯಾವ ಯಾವ ಕರ್ಮಕ್ಕೆ ಉಪಯೋಗಿಸಬೇಕೊ ಅವುಗಳನ್ನು ಆ ಕರ್ಮಕ್ಕೆ ಉಪಯೋಗಿಸಲು ತುಂಬಾ ಅನುಕೂಲವಾಗುವುದು. ಅಲ್ಲದೆ ಯಾವ ಯಾವ ಮಂತ್ರಗಳಲ್ಲಿ ಯಾವ ಯಾವ ವಿಧವಾದ ಆತ್ಮತತ್ವವಿಚಾರಗಳಿವೆಯೊ ಅವುಗಳನ್ನು ತಕ್ಷಣ ಸ್ಫುರಣೆಗೆ ತಂದುಕೊಳ್ಳಲು ಅನುಕೂಲವಾಗುವುದು. ವೇದದ ಅರ್ಥಜ್ಞಾನವು ಅಧ್ಯಯನವನ್ನು ಅವಲಂಬಿಸಿಕೊಂಡಿರುವುದು. ವೇದದ ಅರ್ಥಜ್ಞಾನ ವನ್ನು ಪರಮಶ್ರೇಯಸ್ಸು ಅವಲಂಬಿಸಿಕೊಂಡಿರುವುದು. ಆದುದರಿಂದ ಪರಮ ಶ್ರೇಯಸ್ಸಾದ ಮೋಕ್ಷವನ್ನು ಹೊಂದುವುದಕ್ಕೆ ವೇದಾಧ್ಯಯನದ ಮತ್ತು ಅರ್ಥ ಜ್ಞಾನದ ದೃಢತೆಯು ಅತ್ಯವಶ್ಯಕವಾಗಿ ಬೇಕಾಗುವುದೆಂಬುದನ್ನು ಸೂಚಿಸುವುದು.

ಪ್ರವಚನವೆಂದರೆ ಮತ್ತೊಬ್ಬರಿಗೆ ವೇದಪಾಠವನ್ನು ಕಲಿಸುವುದು ಮತ್ತು ಆತ್ಮ ತತ್ತ್ವೋಪದೇಶಮಾಡುವುದು. "**ವೇದವನ್ನು ಮರೆಯದೆ ಇರುವುದಕ್ಕಾಗಿ ಮತ್ತು ಧರ್ಮವು ಪ್ರವರ್ಧಮಾನವಾಗಿ ಇರುವುದಕ್ಕಾಗಿ**" ಎಂದು ಶ್ರೀಶಂಕರಭಗವತ್ಪಾದಾಚಾರ್ಯರವರು ಭಾಷ್ಯದಲ್ಲಿ ಹೇಳಿರುವರು. ಈ ವಾಕ್ಯಕ್ಕೆ ಅನುಸಾರವಾಗಿ ಶ್ರೀನಾರದಮಹರ್ಷಿಗಳು ಭಕ್ತಿಸೂತ್ರದಲ್ಲಿ "**ಭವತು ನಿಶ್ಚಯದಾರ್ಢ್ಯದೂರ್ಧ್ವಂ ಶಾಸ್ತ್ರರಕ್ಷಣಾತ್ ಮತ್ತು ಅನ್ಯಥಾ ಪಾತಿತ್ಯಶಂಕಯಾ**" ಅಂದರೆ ತತ್ವಜ್ಞಾನಿಯು ಧರ್ಮವನ್ನು ಉದ್ಧಾರಮಾಡುವ ಲೋಕಕಲ್ಯಾಣಕ್ಕೋಸ್ಕರ ಜನಗಳಿಗೆ ಉಪದೇಶ ಮಾಡುತ್ತಾ ಬರುವುದರಿಂದ ಶಾಸ್ತ್ರವನ್ನು ರಕ್ಷಿಸಿಕೊಂಡು ಬಂದಂತಾಗುವುದು ಮತ್ತು ಜನಗಳು ಪತಿತರಾಗುವುದೂ ತಪ್ಪುವುದೆಂದು ಹೇಳಿರುತ್ತಾರೆ. ಆದುದರಿಂದ ಈ ಅನುವಾಕದ ಮಂತ್ರದಲ್ಲಿ ಪ್ರವಚನವೆಂದರೆ ಮತ್ತೊಬ್ಬರಿಗೆ ಬೋಧಿಸುವಿಕೆಗೂ ಹೆಚ್ಚು ಪ್ರಾಶಸ್ತ್ಯಕೊಟ್ಟಿದೆ.

**ಸತ್ಯಮಿತಿ ಸತ್ಯವಚಾ ರಾಥೀತರಃ । ತಪ ಇತಿ**
**ತಪೋನಿತ್ಯಃ ಪೌರುಶಿಷ್ಟಿಃ । ಸ್ವಾಧ್ಯಾಯ ಪ್ರವಚನೇ**
**ಏವೇತಿ ನಾಕೋ ಮೌದ್ಗಲ್ಯಃ । ತದ್ಧಿ ತಪಸ್ತದ್ಧಿ ತಪಃ**

ಸತ್ಯವಚನನಾದ ರಾಥೀತರನು "ಸತ್ಯವನ್ನೇ ಅನುಷ್ಠಾನಮಾಡಬೇಕೆಂದು ಹೇಳುವನು. "ತಪಸ್ಸನ್ನೇ ಮಾಡಬೇಕೆಂದು" ತಪಸ್ಸಿನಲ್ಲಿಯೇ ತತ್ಪರನಾಗಿರುವ ಪೌರುಶಿಷ್ಟಿ ಎಂಬ ಆಚಾರ್ಯನು ಅಭಿಪ್ರಾಯಪಡುತ್ತಾನೆ. "ಸ್ವಾಧ್ಯಾಯ ಪ್ರವಚನಗಳೇ ತಪಸ್ಸೆಂದು" ಮುದ್ಗಲ ವಂಶದ ನಾಕನು ಅಭಿಪ್ರಾಯಪಡುತ್ತಾನೆ. (೧) **ಸತ್ಯವನ್ನೇ** ಅನುಷ್ಠಾನಮಾಡು. (೨) ತಪಸ್ಸನ್ನೇ ಮಾಡು. (೩) **ಸ್ವಾಧ್ಯಾಯ ಪ್ರವಚನಗಳೇ** ತಪಸ್ಸು ಎಂಬ ಮೂರೂ ಈ ಅನುವಾಕದ ಕೊನೆಯಲ್ಲಿ ಇರಲು ಕಾರಣವೇನು ? ಇವು ಯಾವ ಗೂಢವಾದ ತತ್ವಗಳನ್ನು ಪ್ರತಿಪಾದಿಸುವುವು ? ಇವು ಮೂರೂ ಪ್ರತ್ಯೇಕವಾದವುಗಳೇ ಅಥವಾ ಒಟ್ಟುಗೂಡಿರಬೇಕಾದವುಗಳೇ ಎಂಬ ವಿಚಾರವನ್ನು ತಿಳಿಸಿದರೆ ಈ ಅನುವಾಕ ಮಂತ್ರದ ಮಹತ್ವವು ಗೊತ್ತಾಗುವುದು.

ಪ್ರಥಮದಲ್ಲಿ "ಸತ್ಯ" ಪದದ ವಿಚಾರವನ್ನು ತೆಗೆದುಕೊಳ್ಳೋಣ. **'ಸತ್ಯ'** ಪದದ ಮಹತ್ತಿಗೆ ಈ ತೈತ್ತಿರೀಯಶ್ರುತಿ ನಾರಾಯಣಪನ್ನದಲ್ಲಿ—

**ಸತ್ಯೇನ ವಾಯುರಾವಾತಿ ಸತ್ತ್ಯೇನಾದಿತ್ಯೋ ರೋಚತೆದಿವಿ**
**ಸತ್ಯಂ ವಾಚಃ ಪ್ರತಿಷ್ಠಾ ಸತ್ಯೇ ಸರ್ವಂ ಪ್ರತಿಷ್ಠಿತಂ**
**ತಸ್ಮಾತ್ಸತ್ಯಂ ಪರಮಂ ವದನ್ತಿ ।**

ಸತ್ಯದಿಂದಲೇ ವಾಯುವು ಬೀಸುತ್ತದೆ. ಸತ್ಯದಿಂದಲೇ ಸೂರ್ಯನು ಪ್ರಕಾಶ ಪಡಿಸುತ್ತಾನೆ. ನಾದಸ್ವರೂಪವಾದ ಓಂಕಾರಕ್ಕೂ ಸತ್ಯವೇ ಸ್ಥಾನವು. ಸತ್ಯದಲ್ಲೇ ಸರ್ವವೂ ನೆಲಸಿರುವುದರಿಂದ ಸತ್ಯ ಎಂಬುದು ಪರಮಪವಿತ್ರವಾದ ಪರಬ್ರಹ್ಮವೆಂದು ಹೇಳಿದೆ. ಅಲ್ಲದೆ ಸಪ್ತವ್ಯಾಹೃತಿಗಳಲ್ಲಿ **'ಸತ್ಯಂ'** ಎಂಬುದು ಪರಬ್ರಹ್ಮಸ್ವರೂಪವೆಂದು ಹಿಂದೆ ವಿವರಿಸಿಯೂ ಇದೆ. ಸತ್ಯ ಎಂದರೆ ಶಾಶ್ವತವಾದುದು ಮತ್ತು ಯಾವ ಕಾಲ ದಲ್ಲೂ ಯಾವ ವ್ಯತ್ಯಾಸವೂ ಇಲ್ಲದೆ ಏಕಪ್ರಕಾರವಾಗಿರುವುದು. ಹೀಗಿರುವುದೇ ಪರಬ್ರಹ್ಮ. **ಸತ್ಯಕ್ಕೆ** ವ್ಯತಿರಿಕ್ತವಾಗಿರುವುದು "ಮಿಥ್ಯ." ಮಿಥ್ಯವಾದುದು ಜಗತ್ತು ಮತ್ತು ದೇಹ. ಜಗತ್ತು ಈಶ್ವರಾಧೀನ. ಕಾಲಬಂದಾಗ ಈಶ್ವರನು ಜಗತ್ತನ್ನು ಉಪಸಂಹರಿಸಿಕೊಂಡು ಪರಬ್ರಹ್ಮವಾಗುವನು. ಮಿಥ್ಯವಾದ ದೇಹವೇ ನಾವೆಂದು ನಮಗಿರುವ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸಿಕೊಂಡು ನಾವು ಸತ್ಯಸ್ವರೂಪ ವಾದ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯಬೇಕು. ಇದಕ್ಕೆ **"ದೇಹ ನಾನಲ್ಲ ಬ್ರಹ್ಮನೇ ನಾನು"** ಎಂಬ ಜ್ಞಾನವನ್ನು ದೃಢಪಡಿಸಿಕೊಳ್ಳುತ್ತಾ ಹೋಗಬೇಕು. ಈ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದಾಚಾರ್ಯರವರು ಲಘುವಾಕ್ಯವೃತ್ತಿಯಲ್ಲಿ—

**ದೇಹಾತ್ಮಧೀವದ್ಬ್ರಹ್ಮಾಧೀ ದಾರ್ಢ್ಯೇಕೃತಕೃತ್ಯತಾ ।**
**ಯದಾತದಾಯಂ ಮ್ರಿಯತಾಂ ಮುಕ್ತೋಽಸೌ ನಾತ್ರಸಂಶಯಃ ।**

**ತಾತ್ಪರ್ಯ** :—ದೇಹವೇ ನಾನೆಂದು ತಿಳಿದುಕೊಂಡಿರುವಂತೆ ಬ್ರಹ್ಮವೇ ನಾನೆಂಬ ತಿಳುವಳಿಕೆಯ ಅಭ್ಯಾಸದ ಸ್ಥಿರಭಾವನೆಯಲ್ಲಿ ನಾನು ಕೃತಕೃತ್ಯನಾದೆನೆಂಬುದು ಯಾವಾಗ ನಿನ್ನ ಹೃದಯದಲ್ಲಿ ನೆಲೆಸುವುದೊ ಆಗ ಜಡವು ಅನಿತ್ಯವು ಆದ ದೇಹವು ಇದ್ದರೇನು ಸತ್ತರೇನು. ದೇಹವಿದ್ದರೂ ಇಲ್ಲದವನಂತೆ ಇರುತ್ತಾನೆ. **"ನಾನೂ"** ಎಂಬುದು ಅವಿದ್ಯಾ ಬಂಧನದಿಂದ ಬಿಡಿಸಿಕೊಂಡು ಪರಮಾತ್ಮಸ್ವರೂಪವಾಗಿರುವುದು. ಇದರಲ್ಲಿ ಕೊಂಚವೂ ಸಂಶಯವಿಲ್ಲ, ಎಂದು ಹೇಳಿರುತ್ತಾರೆ. ಆದುದರಿಂದ "ಸತ್ಯವನ್ನೇ ಅನುಷ್ಠಾನಮಾಡಬೇಕೆಂದು" ಹೇಳಿರುವ ಸತ್ಯವನ್ನೇ ನುಡಿಯುವ ರಾಥೀತರನ ವಾಕ್ಯ ಜ್ಞಾನಾನ್ಮೋಕ್ಷಃ ಎಂಬುದೆ ಸತ್ಯವಾದುದೆಂಬುದನ್ನು ಪ್ರತಿಪಾದಿಸುವುದು.

**"ತಪಸ್ಸನ್ನೇ ಮಾಡಬೇಕೆಂದು"** ತಪಸ್ಸಿನಲ್ಲಿಯೆ ತತ್ಪರನಾಗಿರುವ ಪೌರು ಶಿಷ್ಟಿ ಎಂಬ ಆಚಾರ್ಯರು ಹೇಳಿರುವ ತಪಸ್ಸಿನ ವಿಚಾರವನ್ನು ತೆಗೆದುಕೊಳ್ಳೋಣ. ಕರ್ಮಕಾಂಡದಂತೆ ತಪಸ್ಸೆಂದರೆ ಕೃಛ್ರಚಾಂದ್ರಾಯಣಾದಿ ವ್ರತಗಳನ್ನು ಮಾಡುವಿಕೆಗೆ ತಪಸ್ಸೆಂದು ಹೆಸರಿದೆ. ತಪಶ್ಶಬ್ದಕ್ಕೆ ಜ್ಞಾನಕಾಂಡದ ಅರ್ಥವೇ ಬೇರೆ. ಈ ಉಪ ನಿಷತ್ತಿನ ಭೃಗುವಲ್ಲಿಯಲ್ಲಿ ಭೃಗುವು ತಪಸ್ಸಿನ ಮೂಲಕ ಬ್ರಹ್ಮಸಾಕ್ಷಾತ್ಕಾರಮಾಡಿ ಕೊಂಡಿರುವನು. ಭೃಗುವಲ್ಲಿಯ ಭಾಷ್ಯದಲ್ಲಿ ಶ್ರೀ ಶಂಕರಭಗವತ್ಪಾದಾಚಾರ್ಯ ರವರು ತಪಶ್ಶಬ್ದಕ್ಕೆ—

**ಬ್ರಹ್ಮವಿಜ್ಞಾನಸಾಧನತ್ವೇನ ತಪಃ ಪ್ರತಿಪೇದೇ ಭೃಗುಃ ।**
**ತಚ್ಚ ತಪಃ ಬಾಹ್ಯಾಂತಃಕರಣ ಸಮಾಧಾನಮ್ ।**
**ತದ್ದ್ವಾರತತ್ವಾತ್ ಬ್ರಹ್ಮಪ್ರತಿಪತ್ತೇಃ ಮನಸಶ್ಚೇಂದ್ರಿಯಾಣಾಂ**
**ಚ ಹ್ಯೈಕಾಗ್ರ್ಯಂ । ಪರಮಂತಪಃ । ತಜ್ಜ್ಯಾಯಃ**
**ಸರ್ವಧರ್ಮೇಭ್ಯಃ ಸ ಧರ್ಮಃ ಪರ ಉಚ್ಯತೇ ।**

**ತಾತ್ಪರ್ಯ :**—ತಪಸ್ಸು ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವುದಕ್ಕೆ ಸಾಧನವೆಂದು ಭೃಗು ತಿಳಿದುಕೊಂಡನು. ಆ ತಪಸ್ಸೆಂದರೆ, ಬಾಹ್ಯೇಂದ್ರಿಯ ಅಂತರಿಂದ್ರಿಯ ಪಂಚಪ್ರಾಣಗಳ ಸಮಾಧಾನವೆಂದರೆ ಸಮತಾರೂಪವಾಗಿ ಏಕಾಗ್ರತೆಗೆ ಬರುವಿಕೆ. ಇಂತಹ ತಪಸ್ಸಿನ ಸಹಾಯದ ಮೂಲಕವಾಗಿಯೆ ಪರಮಾತ್ಮಸಾಕ್ಷಾತ್ಕಾರವಾಗುವುದು. ಮನಸ್ಸು ಮತ್ತು ಇಂದ್ರಿಯಗಳ ಏಕಾಗ್ರವೇ ಹೆಚ್ಚಿನ ತಪಸ್ಸು. ಅದು ಎಲ್ಲಾ ಕರ್ಮಗಳಿಗಿಂತಲೂ ಶ್ರೇಷ್ಠವಾದುದು. ಆ ಕರ್ಮವೇ ಪರಮಧರ್ಮವೆನಿಸುವುದು, ಎಂದು ಹೇಳಿರುವರು.

ಮೇಲಿನ ವಿವರಣೆಗಳಿಂದ ತಪಸ್ಸೆಂದರೆ ಧ್ಯಾನಯೋಗ. ಭೃಗುವು ಧ್ಯಾನಯೋಗದಿಂದಲೇ ಅನ್ನಮಯಕೋಶದ ಬಲೆಯನ್ನು ದಾಟಿ ಪ್ರಾಣಮಯಕೋಶಕ್ಕೆ ಹತ್ತಿದನು. ಹೀಗೆಯೆ ಪ್ರಾಣಮಯಕೋಶದಿಂದ ಮನೋಮಯಕೋಶಕ್ಕೂ, ಮನೋಮಯದಿಂದ ವಿಜ್ಞಾನಕ್ಕೂ, ವಿಜ್ಞಾನದಿಂದ ಆನಂದಮಯಕೋಶಕ್ಕೂ ಹತ್ತಿ ಆನಂದಮಯಕೋಶದಲ್ಲಿ "ನಾನೇ ಬ್ರಹ್ಮನೆಂಬ ಜ್ಞಾನದಿಂದ" ಧ್ಯಾನದಲ್ಲಿ ಮುಳುಗಿದುದರಿಂದ ಆನಂದರೂಪವಾದ ಪರಬ್ರಹ್ಮವೇ ಆದನು. ಭೃಗುವು ಎಲ್ಲಾ ಕೋಶಗಳನ್ನೂ ದಾಟಿ ಆನಂದಮಯಕೋಶಕ್ಕೆ ಹತ್ತಿದಾಗ "ನಾನೇ ಬ್ರಹ್ಮನೆಂದು" ಧ್ಯಾನದಲ್ಲಿ ಮುಳುಗದಿದ್ದರೆ ಬ್ರಹ್ಮಸಾಕ್ಷಾತ್ಕಾರವಾಗುತ್ತಿರಲಿಲ್ಲ. ಆದುದದರಿಂದ ಸತ್ಯವಚನನಾದ ರಾಥೀತರನ "ಜ್ಞಾನಾನ್ಮೋಕ್ಷಃ" ಎಂಬ ವಚನದಂತೆಯೆ ಮೋಕ್ಷವಾಗಿದೆ ಆದರೆ "ತಪಸ್ಸನ್ನೇ ಮಾಡಬೇಕೆಂಬ" ಪೌರುಶಿಷ್ಠಿಯ ವಚನವೂ ಸತ್ಯವಾದ್ದೇ ಆಗಿದೆ. ತಪಸ್ಸಿನ ಅಂದರೆ ಧ್ಯಾನಯೋಗದ ಸಹಾಯವಿಲ್ಲದಿದ್ದರೆ ಭೃಗುವು ಅನ್ನಮಯಾದಿ ಪಂಚಕೋಶಗಳ ಉಪಾಧಿಗಳನ್ನು ದಾಟಿ ಆನಂದಮಯಕೋಶಕ್ಕೆ ಹತ್ತಲು ಸಾಧ್ಯವಾಗುತ್ತಿರಲಿಲ್ಲ. ಆದುದರಿಂದ ತಪಸ್ಸೆಂದರೆ ಧ್ಯಾನಯೋಗವು ಅತ್ಯವಶ್ಯಕವಾಗಿ ಬೇಕೆಂಬುದನ್ನೇ ಪ್ರತಿಪಾದಿಸುವುದು. ಕೆಳಗಿನ ಶ್ರುತಿವಾಕ್ಯಗಳು ಮೇಲಿನ ತತ್ವಗಳನ್ನು ಸಮರ್ಥಿಸುವುವು. ಯೋಗತತ್ವೋಪನಿಷತ್ತಿನಲ್ಲಿ—

**ಯೋಗಹೀನಂ ಕಥಂ ಜ್ಞಾನಂ ಮೋಕ್ಷದಂ ಭವತಿಧ್ರುವಂ ।**
**ಯೋಗೋಪಿ ಜ್ಞಾನಹೀನಸ್ತು ನಕ್ಷಮೋ ಮೋಕ್ಷಕರ್ಮಣಿ ।**
**ತಸ್ಮಾತ್ ಜ್ಞಾನಂಚ ಯೋಗಂಚ ಮುಮುಕ್ಷುರ್ದೃಢಮಭ್ಯಸೇತ್ ।**

**ತಾತ್ಪರ್ಯ** :—ಯೋಗದ ಸಹಾಯವಿಲ್ಲದೆ ನಾನೇ ಬ್ರಹ್ಮನೆಂಬ ಜ್ಞಾನವು ಮೋಕ್ಷವನ್ನು ಕೊಡಲಾರದು. ನಾನು ಬ್ರಹ್ಮನಾಗಲೇಬೇಕೆಂಬ ಜ್ಞಾನವಿಲ್ಲದೆ ಬರೀ ಯೋಗಿಯಾಗಿದ್ದರೂ ಮೋಕ್ಷಕ್ಕೆ ಅಧಿಕಾರಿಯಾಗಲಾರನು. ಆದುದರಿಂದ ಮೋಕ್ಷಾಭಿಲಾಷಿಯು ನಾನು ಬ್ರಹ್ಮನೆಂಬ ಜ್ಞಾನವನ್ನೂ ಯೋಗವನ್ನೂ ದೃಢವಾಗಿ ಅಭ್ಯಾಸಮಾಡಬೇಕೆಂದು ಹೇಳಿದೆ. ಅಲ್ಲದೆ ತ್ರಿಶಖೀಬ್ರಾಹ್ಮಣೋಪನಿಷತ್ತಿನಲ್ಲಿ—

**ಯೋಗಾ ತ್ಸಂಜಾಯತೆ ಜ್ಞಾನಂ ಜ್ಞಾನಾದ್ಯೋಗಃ ಪ್ರವರ್ತತೇ ।**
**ಯೋಗ ಜ್ಞಾನ ಪರೋನಿತ್ಯಂ ಸಯೋಗೀ ನಪ್ರಣಶ್ಯತಿ ॥**

**ತಾತ್ಪರ್ಯ** :—ಪರಮಾತ್ಮನನ್ನು ಹೊಂದಬೇಕೆಂಬ ಅಭಿಲಾಷೆಯು ಧ್ಯಾನಯೋಗಾನುಷ್ಠಾನಕ್ಕೆ ಪ್ರವೇಶಿಸುವಂತೆ ಮಾಡುವುದು. ಧ್ಯಾನಯೋಗದ ಪರಿಪಕ್ವಾವಸ್ಥೆಯಲ್ಲಿ ನಾನೇ ಬ್ರಹ್ಮನೆಂಬ ಜ್ಞಾನದಿಂದ ಮೋಕ್ಷವಾಗುವುದು. ಆದುದರಿಂದ ಯೋಗ ಮತ್ತು ಜ್ಞಾನಗಳಲ್ಲಿ ಆಸಕ್ತನಾಗುವವನು ದುರ್ಗತಿಯನ್ನು ಹೊಂದುವುದಿಲ್ಲ, ಎಂದು ಹೇಳಿದೆ. ಅಲ್ಲದೆ ಶ್ರೀ ಶಂಕರಭಗವತ್ಪಾದಾಚಾರ್ಯರವರು ಲಘುವಾಕ್ಯವೃತ್ತಿಯಲ್ಲಿ—

**ಶಕ್ಯಃ ಸರ್ವನಿರೋಧೇನ ಸಮಾಧಿರ್ಯೋಗಿನಾಂ ಪ್ರಿಯಃ ।**
**ತದಶಕ್ತೌ ಕ್ಷಣಂರುದ್ಧ್ವಾ ಶ್ರದ್ಧಾಳುರ್ಬ್ರಹ್ಮತಾತ್ಮನಃ ।**

**ತಾತ್ಪರ್ಯ** :—ಅಂತರಿಂದ್ರಿಯ ಬಹಿರಿಂದ್ರಿಯ ಪಂಚಪ್ರಾಣಗಳ ನಿರೋಧದಿಂದ ಸಾಧ್ಯವಾದ ಪರಬ್ರಹ್ಮಸಾಕ್ಷಾತ್ಕಾರ ಸ್ವರೂಪವಾದ ಸಮಾಧಿಯು ಯೋಗಿಗಳಿಗೆ ಬಹುಪ್ರಿಯವಾದುದಾಗಿದೆ. ರೋಗಾದಿಗಳಿಂದಾಗಲಿ ನಿರ್ಬಲತೆಯಿಂದಾಗಲಿ ಇತರ ಪ್ರಬಲವಾದ ಕಾರಣಗಳಿಂದಾಗಲಿ ತಪಸ್ಸಿಗೆಂದರೆ ಯೋಗಾಭ್ಯಾಸಕ್ಕೆ ಅರ್ಹತೆ ಇಲ್ಲದಿದ್ದರೆ ಮರೆಯದೆ ಸದಾಕಾಲದಲ್ಲೂ ನಾನು ಪರಬ್ರಹ್ಮತ್ವವನ್ನು ಪಡೆಯಬೇಕೆಂಬ ಶ್ರದ್ಧೆಯಿಂದ ಬ್ರಹ್ಮಚಿಂತನೆಯಲ್ಲಿರು. ಅಂದರೆ ಯೋಗಾನುಷ್ಠಾನಕ್ಕೆ ಅರ್ಹತೆಯಿಲ್ಲವೆಂದು ಬ್ರಹ್ಮಚಿಂತನೆಯನ್ನೂ ತ್ಯಜಿಸಿದರೆ ಹತ್ತಿದ ಮೆಟ್ಟಲಿಂದ ಜಾರಿ ಪ್ರಾಪಂಚಿಕ ಬಂಧನದಲ್ಲಿಯೆ ಬಿದ್ದಿರಬೇಕಾಗುವುದು. ಬ್ರಹ್ಮಚಿಂತನೆಯಲ್ಲಿದ್ದು ಯೋಗಾನುಷ್ಠಾನದ ದಾರಿಯ ಮೂಲಕ ಬ್ರಹ್ಮಜ್ಞಾನವನ್ನು ಪಡೆಯಬೇಕೆಂದು ಹಂಬಲಿಸುತ್ತಿದ್ದರೆ ಕಾಲಕ್ರಮದಲ್ಲಿ ಈಶ್ವರಾನುಗ್ರಹದಿಂದ ಅನುಕೂಲವಾಗುವುದು. ತಪಸ್ಸಿನಲ್ಲಿಯೆ ನಿರತನಾಗಿದ್ದ ಪೌರುಶಿಷ್ಟಿಯೆಂಬ ಆಚಾರ್ಯನು ಎಂದು ಇರುವುದರಿಂದ ಆಚಾರ್ಯನೆಂದರೆ ತಾನು ಯೋಗಾನುಷ್ಠಾನವನ್ನು ಆಚರಿಸಿ ಅನುಭವಿಯಾದ್ದರಿಂದ ಆಚಾರ್ಯನೆನಿಸಿಕೊಂಡಿರುವನು. ಮೇಲಿನ ತತ್ವಗಳ ವಿವರಣೆಗಳಿಂದ "ತಪಸ್ಸು" ಅತ್ಯವಶ್ಯಕವಾಗಿ ಬೇಕಾದುದೆಂದಾಯಿತು.

ಮುದ್ಗಲ ವಂಶದ ನಾಕನು "**ಸ್ವಾಧ್ಯಾಯ ಪ್ರವಚನಗಳೇ ತಪಸ್ಸು**" ಎಂದು ಹೇಳಿರುವುದರ ವಿಚಾರವನ್ನು ತೆಗೆದುಕೊಳ್ಳೋಣ. ಅರ್ಥಜ್ಞಾನವಿಲ್ಲದೆ ವೇದವನ್ನು ಕಂಠಪಾಠಮಾಡಿ ಕಲಿಯುವಿಕೆಯು ಮತ್ತು ಇತರರಿಗೆ ಕಂಠಪಾಠವಾಗುವವರಿಗೆ ಕಲಿಸುವಿಕೆಯು ಮಾತ್ರ ಈ ಸಂದರ್ಭಕ್ಕೆ ಅನ್ವಯವಾಗುವುದಿಲ್ಲ. ಇಲ್ಲಿಯ ಸಂದರ್ಭವು ಜ್ಞಾನಕಾಂಡಕ್ಕೆ ಸಂಬಂಧಪಟ್ಟಿರುವುದರಿಂದ ವೇದಾರ್ಥಸ್ವರೂಪವಾದ ಆತ್ಮತತ್ತ್ವವಿಚಾರಗಳನ್ನು ತಾನು ಕಲಿಯುವಿಕೆ ಮತ್ತೊಬ್ಬರಿಗೆ ಕಲಿಸುವಿಕೆಯು ತತ್ವಕ್ಕೇ ಅನ್ವಯವಾಗುವುದು. ಆದುದರಿಂದ ಆತ್ಮತತ್ವವನ್ನು ತಾನು ಕಲಿಯುವಿಕೆ ಮತ್ತು ಮತ್ತೊಬ್ಬರಿಗೆ ಕಲಿಸುವಿಕೆಗಳು ತಪಸ್ಸೆಂದು ಮುದ್ಗಲ ವಂಶದ ನಾಕನ ಅಭಿಪ್ರಾಯವಾಗಿದೆ. ರಾಥೀತರನ "ನಾನೆ ಬ್ರಹ್ಮ" ಎನ್ನುವುದು ಜ್ಞಾನಶಕ್ತಿಗೆ ಸೇರಿದುದು. ಪೌರುಶಿಷ್ಟಿಯ ಧ್ಯಾನಯೋಗ ಮತ್ತು ನಾಕನ ಆತ್ಮತತ್ವವಿಚಾರದ ಕಲಿಯುವಿಕೆ ಕಲಿಸುವಿಕೆಗಳು ಕ್ರಿಯಾಶಕ್ತಿಗೆ ಸೇರಿದುದಾದ್ದರಿಂದ ಎರಡಕ್ಕೂ ತಪಶ್ಶಬ್ದವು ಅನ್ವಯವಾಗುವುದು. ಆತ್ಮತತ್ವವಿಚಾರದ ಕಲಿಯುವಿಕೆ ಕಲಿಸುವಿಕೆಗಳೂ ಅವಶ್ಯಕವಾಗಿ ಬೇಕೆನ್ನುವುದಕ್ಕೆ ಶ್ರೀಶಂಕರಭಗವತ್ಪಾದಾಚಾರ್ಯರವರು ಲಘುವಾಕ್ಯವೃತ್ತಿಯಲ್ಲಿ—

**ತಚ್ಚಿಂತನಂ ತತ್ಕಥನಮನ್ಯೋನ್ಯಂ ತ್ರಬೋಧನಮ್ ।**
**ಏತದೇಕ ಪರತ್ವಂಚ ಬ್ರಹ್ಮಾಭ್ಯಾಸಂ ವಿದುರ್ಬುಧಾಃ ॥**

**ತಾತ್ಪರ್ಯ :**—'ದೇಹನಾನಲ್ಲ ಬ್ರಹ್ಮವೆ ನಾನು' ಎಂಬುದಾಗಿ ಸದಾಕಾಲ ಮನನಮಾಡುವಿಕೆಯೂ, ಆತ್ಮತತ್ವಗಳನ್ನು ತಿಳಿಸುವ ಗ್ರಂಥಗಳ ಪಠನ ಮತ್ತು ಶ್ರವಣಗಳೂ, ಒಬ್ಬೆರೊಬ್ಬರಿಗೆ ಆತ್ಮತತ್ವವಿಚಾರಗಳನ್ನು ಹೇಳಿ ಕೇಳಿ ವಿಚಾರಗಳನ್ನು ದೃಢಪಡಿಸಿಕೊಳ್ಳುವಿಕೆಯೂ, ಈ ಶ್ರವಣಮನನಪಠನಗಳಿಗಿಂತ ಶ್ರೇಷ್ಠವಾದ ಬ್ರಹ್ಮೈಕ್ಯಧ್ಯಾನವೂ ಸಹ ಬ್ರಹ್ಮಸಾಕ್ಷಾತ್ಕಾರಕ್ಕೆ ಅಗತ್ಯವಾದ ಅಭ್ಯಾಸಗಳೆಂಬದಾಗಿ ಜ್ಞಾನಿಗಳು ತಿಳಿದಿರುವರು, ಎಂದು ಹೇಳಿರುತ್ತಾರೆ. ಆದುದರಿಂದ ಮುದ್ಗಲವಂಶದ ನಾಕನು ಹೇಳುವ ಆತ್ಮತತ್ವದ ಅಧ್ಯಯನ ಪ್ರವಚನಗಳು ಮೋಕ್ಷಕ್ಕೆ ಅತ್ಯವಶ್ಯಕವಾಗಿ ಬೇಕಾದುದೆಂಬುದನ್ನು ಪ್ರತಿಪಾದಿಸುವುದು.

**ರಾಥೀತರ, ಪೌರುಶಿಷ್ಟಿ, ನಾಕ,** ಈ ಮೂರುಜನ ಮಹಾತ್ಮರ ಅಭಿಪ್ರಾಯದ ವಚನಗಳನ್ನು ತಿಳಿಸಿದ ಅನಂತರ ಮಂತ್ರದ ಕೊನೆಯಲ್ಲಿ "**ತದ್ಧಿತಪಃ ತದ್ಧಿತಪಃ**" ಅಂದರೆ "**ಅದೇತಪಸ್ಸು ಅದೇತಪಸ್ಸು**" ಎಂಬದಾಗಿ ಎರಡಾವರ್ತಿ ಒತ್ತಿ ಹೇಳಿರುವುದರ ತತ್ವವೇನೆಂದರೆ, ಇದುವರಿಗೂ ವಿವರಿಸಿಕೊಂಡು ಬಂದಿರುವ ಮೂರುಜನ ಮಹಾತ್ಮರೂ ತಿಳಿಸುವ (೧) **ದೇಹನಾನಲ್ಲ ಬ್ರಹ್ಮನೇ ನಾನೆಂಬ ಅನುಸಂಧಾನದ ಜ್ಞಾನ.** (೨) **ಧ್ಯಾನಯೋಗಾನುಷ್ಠಾನ.** (೩) **ಆತ್ಮತತ್ವವಿದ್ಯಾ ದೃಢತೆ ಈ**

ಮೂರೂ ಒಟ್ಟಿಗೆ ಸೇರಿದ್ದರೇನೆ ಬ್ರಹ್ಮಸಾಕ್ಷಾತ್ಕಾರದ ಫಲಪ್ರಾಪ್ತಿಯಾಗುವುದು. ಯಾವುದರಲ್ಲಿ ಲೋಪವಿದ್ದರೂ ಫಲಕಾರಿಯಾಗುವುದಿಲ್ಲ. ಆದುದರಿಂದ ಈ ಮೂರೂ ಒಟ್ಟುಗೂಡಿರುವ ಸುಕೃತವೇ ತಪಸ್ಸು. ಮೂರೂ ಒಟ್ಟುಗೂಡಿರುವ ಸುಕೃತವೇ ತಪಸ್ಸು ಎಂದು ಒತ್ತಿ ತಿಳಿಸಲು ಎರಡಾವರ್ತಿ ಹೇಳಿರುವುದು.

ಈ ಅನುವಾಕದ ಮಂತ್ರವು ಯಾವರೀತಿಯ ಕಾರ್ಯದಲ್ಲಿ ಇದ್ದರೂ ಅಧ್ಯಯನ ಪ್ರವಚನಗಳನ್ನು ಮಾಡುತ್ತಿರಬೇಕೆಂಬುದನ್ನು ಸ್ಥೂಲವಾಗಿ ಸೂಚಿಸುವುದು. ಆದರೆ ಈ ಮಂತ್ರದ ಕೊನೆಯಲ್ಲಿ ಮೂರುಜನ ಮಹಾತ್ಮರು ಹೇಳಿರುವ ಸತ್ಯ, ತಪಸ್ಸು, ಅಧ್ಯಯನಪ್ರವಚನಗಳ ತತ್ವಗಳು ಜ್ಞಾನಕಾಂಡಕ್ಕೇ ಮುಖ್ಯ ಪ್ರಾಶಸ್ತ್ಯವನ್ನು ಕೊಟ್ಟಿರುವುದರಿಂದ ಈ ಮಂತ್ರದ ಅರ್ಥವು ಜ್ಞಾನಕ್ಕೆ ಹೆಚ್ಚು ಸಂಬಂಧಪಟ್ಟದ್ದೆಂತಲೇ ಹೇಳಬೇಕಾಗುವುದು. ಶಿಕ್ಷಾವಲ್ಲಿಯ ೫, ೬, ೭, ೮, ೯, ೧೦ ಈ ಆರು ಅನುವಾಕಗಳ ಮಂತ್ರಗಳು ಒಂದೇ ಗುಂಪಿಗೆ ಸೇರಿ ಒಂದಕ್ಕೊಂದು ಅನ್ಯೋನ್ಯ ಸಹಕಾರಿಗಳಾಗಿ ಜ್ಞಾನಮಾರ್ಗದ ತತ್ವಗಳನ್ನೇ ಪ್ರತಿಪಾದಿಸಿ ಓಂಕಾರಸ್ವರೂಪವಾದ ಪರಬ್ರಹ್ಮಸಾಕ್ಷಾತ್ಕಾರದ ಫಲವನ್ನುಂಟುಮಾಡುವವುಗಳಾಗಿವೆ. ಆತ್ಮತತ್ವವಿಚಾರವನ್ನು ಚೆನ್ನಾಗಿ ಕಲಿಯಬೇಕೆಂಬುದನ್ನು ಈ ೯ನೇ ಅನುವಾಕದ ಮಂತ್ರವು ತಿಳಿಸುವುದು. ಈ ಕಲಿಯುವಿಕೆಯ ವಿಚಾರವು ೫ನೇ ಅನುವಾಕದ ಮಂತ್ರದಲ್ಲೂ ಇದೆ. ತಪಸ್ಸೆಂದರೆ ಯೋಗಾನುಷ್ಠಾನದ ವಿಚಾರವು ೫, ೬, ೭, ೮ನೇ ಅನುವಾಕ್ಯಗಳಲ್ಲಿವೆ. ಅಂದರೆ ೬ನೇ ಅನುವಾಕದಲ್ಲಿ ತಿಳಿಸುವ ಓಂಕಾರಸ್ವರೂಪವಾದ ಪರಮಾತ್ಮಸಾಕ್ಷಾತ್ಕಾರಕ್ಕೆ ಶಿಕ್ಷಾವಲ್ಲಿಯ ೧೦ನೇ ಅನುವಾಕದ ಮಂತ್ರಹೊರತು ಇತರ ಅನುವಾಕಗಳ ತತ್ವಗಳೂ ಸಹಾಯಕಗಳಾಗಿವೆ.

೧೦ನೇ ಅನುವಾಕದ ಮಂತ್ರವಾದರೊ ಪರಮಾತ್ಮಸಾಕ್ಷಾತ್ಕಾರವನ್ನು ಹೊಂದಿ ಆತ್ಮಜ್ಞಾನಿ ಎನಿಸಿಕೊಂಡ ತ್ರಿಶಂಕುವು ಆನಂದಮಗ್ನತೆಯ ಉನ್ಮನೀಭಾವದಲ್ಲಿದ್ದುಕೊಂಡು ತಾನು ಕೃತಕೃತ್ಯನಾದೆನೆಂದೂ ತಾನೂ ಬ್ರಹ್ಮನೂ ಬೇರೆಯಲ್ಲವೆಂದೂ ವರ್ಣಿಸಿರುವುದನ್ನು ತಿಳಿಸುವುದು. ಅಂದರೆ ಇಂತಹ ಜೀವನ್ಮುಕ್ತಸ್ಥಿತಿಯನ್ನು ಪಡೆದಿರುವವನು ಮೇಲೆ ತಿಳಿಸಿರುವ ಸತ್ಯ, ತಪಸ್ಸು, ಅಧ್ಯಯನ ಪ್ರವಚನಗಳ ಆಚರಣೆಯ ಕಟ್ಟಿಗೆ ಒಳಪಡುವುದಿಲ್ಲ. ಬ್ರಹ್ಮಸಾಕ್ಷಾತ್ಕಾರವಾಗಿ ತ್ರಿಶಂಕುವು ವರ್ಣಿಸಿರುವಂತಹ ಜೀವನ್ಮುಕ್ತಸ್ಥಿತಿಯನ್ನು ಪಡೆಯುವವರಿಗೂ ಇದುವರಿಗೂ ವಿವರಿಸಿರುವ ಸತ್ಯ, ತಪಸ್ಸು, ಅಧ್ಯಯನ ಪ್ರವಚನಗಳ ಕಟ್ಟಿನಲ್ಲಿ ಇದ್ದೇ ಇರಬೇಕೆಂಬುದನ್ನು ಸೂಚಿಸುವುದು.

# ೧೪ನೆಯ ಪ್ರಕರಣ

## (೧) ಗುರುಕುಲವಾಸದ ಅಂತ್ಯದಲ್ಲಿ ಆಚಾರ್ಯನು ಶಿಷ್ಯನಿಗೆ ಆಶೀರ್ವದಿಸಿ ಆಜ್ಞೆ ಮಾಡುವಿಕೆ

## (೨) ಶಿಕ್ಷಾವಲ್ಲಿ, ಆನಂದವಲ್ಲಿ, ಭೃಗುವಲ್ಲಿಗಳಲ್ಲಿರುವ ತತ್ತ್ವಗಳ ವಿಚಾರ

೧೪ನೇ ಪ್ರಕರಣದಲ್ಲಿರುವ ವಿಷಯಗಳು :—[ವೇದಾಧ್ಯಯನ ಪೂರ್ಣವಾದ ಅನಂತರ ಗುರುಕುಲವಾಸದಲ್ಲಿರುವ ಶಿಷ್ಯನು ಕರ್ಮ, ಜ್ಞಾನಪರವಾದ ವೇದಾರ್ಥವನ್ನು ತಕ್ಕಮಟ್ಟಿಗೆ ಗುರುವಿನಿಂದ ತಿಳಿದುಕೊಂಡು ಬ್ರಹ್ಮಚರ್ಯಾಶ್ರಮವನ್ನು ತ್ಯಜಿಸಿ ಗೃಹಸ್ಥಾಶ್ರಮವನ್ನು ಸ್ವೀಕರಿಸಲು ಗುರುಕುಲವಾಸದಿಂದ ಹೊರಡುವ ಕಾಲದಲ್ಲಿ ಆಚಾರ್ಯನು ಶಿಷ್ಯನಿಗೆ ಆಶೀರ್ವದಿಸಿ ಜೀವಿತ ಕಾಲದಲ್ಲಿ ಯಾವರೀತಿ ನಡೆದುಕೊಳ್ಳಬೇಕೆಂಬುದನ್ನು ಆಜ್ಞಾರೂಪವಾಗಿ ಹೇಳಿಕಳುಹಿಸುವ ವಿಚಾರಗಳಿರುವುವು.]

**ವೇದಮನೂಚ್ಯಾಚಾರ್ಯೋಽನ್ತೇವಾಸಿನಮನುಶಾಸ್ತಿ । ಸತ್ಯಂ ವದ । ಧರ್ಮಂ ಚರ । ಸ್ವಾಧ್ಯಾಯಾನ್ಮಾ ಪ್ರಮದಃ । ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತನ್ತುಂ ಮಾ ವ್ಯವಚ್ಛೇತ್ಸೀಃ । ಸತ್ಯಾನ್ನ ಪ್ರಮದಿತವ್ಯಮ್ । ಧರ್ಮಾನ್ನ ಪ್ರಮದಿತವ್ಯಮ್ । ಕುಶಲಾನ್ನ ಪ್ರಮದಿತವ್ಯಮ್ । ಭೂತ್ಯೈ ನ ಪ್ರಮದಿತವ್ಯಮ್ । ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಮ್ । ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಮ್ । ಮಾತೃದೇವೋ ಭವ । ಪಿತೃದೇವೋ ಭವ । ಆಚಾರ್ಯದೇವೋ ಭವ । ಅತಿಥಿದೇವೋ ಭವ । ಯಾನ್ಯನವದ್ಯಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ । ನೋ ಇತರಾಣಿ । ಯಾನ್ಯಸ್ಮಾಕಗ್ಂ ಸುಚರಿತಾನಿ । ತಾನಿ ತ್ವಯೋಪಾಸ್ಯಾನಿ । ನೋ ಇತರಾಣಿ ।**

**ಯೇ ಕೇ ಚಾಸ್ಮಚ್ಛ್ರೇಯಾಗ್‍ಂಸೋ ಬ್ರಾಹ್ಮಣಾಃ । ತೇಷಾಂ ತ್ವಯಾಽಽಸನೇನ ಪ್ರಶ್ವಸಿತವ್ಯಮ್ । ಶ್ರದ್ಧಯಾ ದೇಯಮ್ । ಅಶ್ರದ್ಧಯಾಽದೇಯಮ್ । ಶ್ರಿಯಾ ದೇಯಮ್ । ಹ್ರಿಯಾ ದೇಯಮ್ । ಭಿಯಾ ದೇಯಮ್ । ಸಂವಿದಾ ದೇಯಮ್ । ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ ವೃತ್ತಚಿಕಿತ್ಸಾ ವಾ ಸ್ಯಾತ್। ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ । ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಃ ಸ್ಯುಃ । ಯಥಾ ತೇ ತತ್ರ ವರ್ತೇರನ್। ತಥಾ ತತ್ರ ವರ್ತೇಥಾಃ । ಅಥಾಭ್ಯಾಖ್ಯಾತೇಷು । ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ । ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಃ ಸ್ಯುಃ।ಯಥಾ ತೇ ತೇಷು ವರ್ತೇರನ್।ತಥಾ ತೇಷು ವರ್ತೇಥಾಃ । ಏಷ ಆದೇಶಃ । ಏಷ ಉಪದೇಶಃ । ಏಷಾ ವೇದೋಪನಿಷತ್ । ಏತದನುಶಾಸನಮ್ । ಏವಮುಪಾಸಿತವ್ಯಮ್ । ಏವಮುಚೈತದುಪಾಸ್ಯಮ್ ॥**

ಗುರುಕುಲವಾಸದಲ್ಲಿದ್ದಾಗ ಶಿಷ್ಯನು ಸಂಧ್ಯಾವಂದನ ಅಗ್ನಿಕಾರ್ಯ ಮುಂತಾದ ಈಶ್ವರನ ಪ್ರಾರ್ಥನೆಗಳಾದ ನಿತ್ಯಕರ್ಮಗಳನ್ನು ಮಾಡಿಕೊಂಡು ಆಚಾರ್ಯನಿಂದ ಸ್ವರಸಹಿತವಾದ ವೇದಮಂತ್ರಗಳನ್ನು ಕಂಠಪಾಠವಾಗುವವರೆಗೂ ಕಲಿಯುವನು. ಇದರ ಜೊತೆಗೆ ವೇದಾರ್ಥಜ್ಞಾನವಾಗುವುದಕ್ಕೆ ಸಾಹಿತ್ಯ ವ್ಯಾಕರಣ ಮುಂತಾದವುಗಳನ್ನೂ ಗುರುಮುಖದಿಂದ ಅಭ್ಯಾಸಮಾಡುತ್ತಾ ಬರುವನು. ತನ್ನ ೮ನೇ ವಯಸ್ಸಿನಿಂದ ಗುರುಕುಲವಾಸಕ್ಕೆ ಪ್ರಾರಂಭಿಸಿ ತನ್ನ ೨೦-೨೨ನೇ ವಯಸ್ಸಿನವರೆಗೂ ವೇದಾಧ್ಯಯನವನ್ನು ಪೂರ್ಣಗೊಳಿಸಿ, ಕರ್ಮಜ್ಞಾನಗಳೆರಡನ್ನೂ ಬೋಧಿಸುವ ವೇದದ ಅರ್ಥವನ್ನು ತಕ್ಕಮಟ್ಟಿಗೆ ಗ್ರಹಿಸುವ ಶಕ್ತಿಯನ್ನು ಹೊಂದಿ, ಗೃಹಸ್ಥಾಶ್ರಮದಲ್ಲಿ ನಿತ್ಯವೂ ತಾನು ಆಚರಿಸಬೇಕಾದ ಕರ್ಮವಿಚಾರವನ್ನೂ, ಜ್ಞಾನಕಾಂಡಕ್ಕೆ ಬೇಕಾದ ಆತ್ಮತತ್ವವನ್ನೂ ಉಪದೇಶ ತೆಗೆದುಕೊಂಡು ಗುರುಕುಲವಾಸದಿಂದ ಹೊರಡುತ್ತಾನೆ.

ಗುರುಕುಲವಾಸದಲ್ಲಿ ಕಂಠ ಪಾಠವಾಗುವವರಿಗೂ ವೇದಾಧ್ಯಯನಮಾಡಿಸಿ ಕರ್ಮಾಚರಣೆಯ ವಿಚಾರವನ್ನು ಮಾತ್ರ ತಿಳಿಸುತ್ತಾರೆಯೆ ಹೊರತು ಜ್ಞಾನವಿದ್ಯೆಯ ವಿಚಾರವನ್ನು ತಿಳಿಸುವುದಿಲ್ಲವೆಂದು ಕೆಲವರು ಅಭಿಪ್ರಾಯಪಡಬಹುದು. ಇದು ಸರಿಯಾದ ಅಭಿಪ್ರಾಯವಲ್ಲ. ಅಮೃತರೂಪವಾದ ಪರಮಾತ್ಮಸಾಕ್ಷಾತ್ಕಾರವನ್ನು ಹೊಂದುವಂತೆ ಬುದ್ಧಿಶಕ್ತಿಯನ್ನೂ ಮತ್ತು ಇತರ ಸಲಕರಣೆಗಳನ್ನೂ ಅನುಗ್ರಹಿಸೆಂದು

ಶಿಷ್ಯನು ಗುರುಕುಲವಾಸದಲ್ಲಿದ್ದಾಗ ಓಂಕಾರಸ್ವರೂಪಿಯಾದ ಈಶ್ವರನನ್ನು ಪ್ರಾರ್ಥಿಸಿರುವುದು ಶಿಕ್ಷಾವಲ್ಲಿಯ ೪ನೇ ಅನುವಾಕದ ಮಂತ್ರದಲ್ಲಿ ಇದ್ದೇ ಇದೆ. ಅಲ್ಲದೆ ವೇದಾಧ್ಯಯನ ಮೊದಲುಗೊಂಡು ಪರಮಾತ್ಮಸಾಕ್ಷಾತ್ಕಾರದವರಿಗೂ ಶಿಷ್ಯನು ಗುರುವಿನಿಂದ ಶಿಕ್ಷಿತನಾಗುವ ವಿಚಾರಗಳೂ ಈ ಶಿಕ್ಷಾವಲ್ಲಿಯಲ್ಲೇ ಬಂದಿರುವುದರಿಂದ ಗುರುಕುಲವಾಸದಲ್ಲಿ ಶಿಷ್ಯನಿಗೆ ಆಚಾರ್ಯನು ಕರ್ಮಾಚರಣೆಯ ಉಪದೇಶದ ಜೊತೆಗೆ ಜ್ಞಾನವಿದ್ಯೆಯನ್ನು ತಕ್ಕಮಟ್ಟಿಗೆ ಉಪದೇಶಮಾಡುತ್ತಾನೆಂಬುದು ಸ್ಪಷ್ಟವಾಗಿದೆ. ಇವುಗಳನ್ನು ಅಭಿವೃದ್ಧಿಪಡಿಸಿಕೊಳ್ಳುವುದು ಶಿಷ್ಯನಿಗೆ ಸೇರಿದ್ದಾಗಿದೆ.

ಜ್ಞಾನಮಾರ್ಗದಲ್ಲೂ, ಜ್ಞಾನಮಾರ್ಗಕ್ಕೆ ಸಹಾಯವಾದ ಕರ್ಮಮಾರ್ಗದಲ್ಲೂ, ಜ್ಞಾನಕರ್ಮಮಾರ್ಗಗಳಿಗೆ ಸಹಾಯವಾದ ಲೋಕವ್ಯವಹಾರದಲ್ಲೂ ಶಿಷ್ಯನು ತನ್ನ ಜೀವಾವಧಿ ಯಾವರೀತಿ ನಡೆದುಕೊಳ್ಳಬೇಕೊ ಅದನ್ನು ಆಚಾರ್ಯನು ಗುರುಕುಲವಾಸದಿಂದ ಶಿಷ್ಯನನ್ನು ಕಳುಹಿಸುವಾಗ ಆಶೀರ್ವದಿಸಿ ಆಜ್ಞಾರೂಪವಾಗಿ ವಿಧಿಸುವವುಗಳನ್ನೇ ಈ ಮಂತ್ರವು ತಿಳಿಸುವುದು.

**"ವೇದಮನೂಚ್ಯಾಚಾರ್ಯೋಽನ್ತೇವಾಸಿನಮನುಶಾಸ್ತಿ"**

ವೇದಾಧ್ಯಯನ ವಿದ್ಯೆಯು ಪೂರ್ಣವಾದ ಅನಂತರ ಆಚಾರ್ಯನು ವೇದದ ಅರ್ಥವನ್ನು ತಕ್ಕಮಟ್ಟಿಗೆ ಕಲಿಸಿಕೊಟ್ಟು ಶಿಷ್ಯನನ್ನು ಗುರುಕುಲವಾಸದಿಂದ ಕಳುಹಿಸುವಾಗ ಮುಂದೆ ತಿಳಿಸಿರುವಂತೆ ನಡೆದುಕೊಳ್ಳಬೇಕೆಂದು ಆಜ್ಞಾರೂಪವಾದ ಉಪದೇಶಮಾಡಿ ಕಳುಹಿಸುತ್ತಾನೆ.

**"ಸತ್ಯಂ ವದ"**=(೧) ಯಥಾರ್ಥವಾದುದನ್ನೇ ನುಡಿ ಮತ್ತು ಶರೀರದಿಂದಲೂ ಅದರಂತೆ ಕಾರ್ಯಮಾಡು. (೨) ಸತ್ಯಸ್ವರೂಪನಾದ ಪರಮಾತ್ಮನ ವಿಚಾರಗಳೇ ನಿನ್ನ ನುಡಿಯಾಗಿರಲಿ.

**"ಧರ್ಮಂ ಚರ"**=(೧) ಮೋಕ್ಷಕ್ಕೆ ಸಾಧನವಾದ ಸಾತ್ವಿಕವಾದ ದೇವತಾಕರ್ಮಗಳನ್ನು ಆಚರಿಸು. ಮೋಕ್ಷದ ಗುರಿಗೆ ಅನುಸಾರವಾದ ಸಾತ್ವಿಕವಾದ ಪ್ರಪಂಚದ ನಡೆವಳಿಕೆಗಳಲ್ಲಿರು. (೨) ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವ ಕರ್ಮಾನುಷ್ಠಾನವಾದ ಆತ್ಮತತ್ವದ ಶ್ರವಣ, ಮನನ, ನಿದಿಧ್ಯಾಸ (ಧ್ಯಾನ), ಸಮಾಧಿಗಳ ಕಾರ್ಯಗಳನ್ನು ಆಚರಿಸು,

**"ಸ್ವಾಧ್ಯಾಯಾನ್ಮಾಪ್ರಮದಃ"**=ವೇದಾಧ್ಯಯನಮಾಡುವದನ್ನು ಮರೆಯಬೇಡ. (೨) ಆತ್ಮತತ್ವಗಳನ್ನು ಮರೆಯದೆ ಪುನರಾವರ್ತಿಮಾಡುತ್ತಿರು.

**"ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತನ್ತುಂ ಮಾ ವ್ಯವ**

ಚ್ಛೇತ್ಸೀಃ"=(೧) ಆಚಾರ್ಯನಿಗೋಸ್ಕರ ಪ್ರಿಯವಾದ ಧನವನ್ನು ಸಂಪಾದನೆಮಾಡಿ ಅದನ್ನು ತಂದು ಆಚಾರ್ಯನಿಗೆ ಅರ್ಪಿಸಿ ಅವನ ಅಪ್ಪಣೆಯನ್ನು ಪಡೆದು ಅನುರೂಪಳಾದ ಕನ್ಯೆಯನ್ನು ವಿವಾಹಮಾಡಿಕೊಂಡು ಸಂತಾನವನ್ನು ಪಡೆ. ಸಂತಾನವನ್ನು ಕುಗ್ಗಿಸಬೇಡ.

"ಸತ್ಯಾನ್ನ ಪ್ರಮದಿತವ್ಯಮ್"=(೧) ಯಥಾರ್ಥವಾದುದನ್ನು ತಿಳಿಸಲು ಮರೆಯಬೇಡ. ಮರೆತರೆ ಅನೃತವನ್ನು ನುಡಿಯಲು ಅವಕಾಶವಾಗುವುದು. (೨) ಪರಮಾತ್ಮತತ್ವವನ್ನು ನುಡಿಯಲು ಮರೆಯಬೇಡ. ಮರೆತರೆ ಪ್ರಾಪಂಚಿಕ ವಿಷಯಗಳು ನಿನ್ನನ್ನು ಕಟ್ಟಿಹಾಕುವುವು.

"ಧರ್ಮಾನ್ನ ಪ್ರಮದಿತವ್ಯಮ್"=ಧರ್ಮದ ನಡೆವಳಿಕೆಯಲ್ಲಿರುವುದನ್ನು ಮರೆಯಬೇಡ. ಮರೆತರೆ ಅಧರ್ಮಮಾರ್ಗಕ್ಕೆ ಒಳಗಾಗುತ್ತೀಯೆ. ಸತ್ಯ, ಧರ್ಮಗಳ ವಿಚಾರ ಮೇಲೆಯೂ ಬಂದಿದೆ. ಎರಡಾವರ್ತಿ ಬಂದಿರುವುದರಿಂದ ಸತ್ಯ, ಧರ್ಮಗಳು ಆಚರಣೆಗೆ ಬಹುಮುಖ್ಯವಾದವುಗಳೆಂದು ಸೂಚಿಸುತ್ತದೆ.

"ಕುಶಲಾನ್ನ ಪ್ರಮದಿತವ್ಯಮ್"= ನಿನ್ನನ್ನು ಸಂರಕ್ಷಿಸಿಕೊಳ್ಳುವುದಕ್ಕೆ ಧರ್ಮಯುಕ್ತವಾದ ಕಾರ್ಯವನ್ನು ಮಾಡಲು ಮರೆಯಬಾರದು.

"ಭೂತ್ಯೈ ನ ಪ್ರಮದಿತವ್ಯಮ್"=ನಿನ್ನ ಪ್ರಾಪಂಚಿಕದ ಮತ್ತು ಪಾರಮಾರ್ಥಿಕದ ಅಭ್ಯುದಯಕ್ಕೆ ಬೇಕಾದ ಐಶ್ವರ್ಯಸಂಪಾದನೆಗೆ ಅಜಾಗರೂಕನಾಗಿರಬೇಡ.

"ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಮ್"

(೧) ವೇದಾಧ್ಯಾಯನದ ಪುನರಾವರ್ತಿ ಮಾಡುವಿಕೆಯಲ್ಲೂ, ಇತರರಿಗೆ ಹೇಳಿಕೊಡುವುದರಲ್ಲೂ ಅಜಾಗರೂಕನಾಗಿರಬೇಡ. (೨) ಆತ್ಮತತ್ವವನ್ನು ಪುನರಾವರ್ತಿ ಮಾಡುವಿಕೆಯಲ್ಲೂ, ಆತ್ಮತತ್ವವನ್ನು ಇತರರಿಗೆ ಉಪದೇಶಮಾಡುವಿಕೆಯಲ್ಲೂ ಅಜಾಗರೂಕನಾಗಿರಬೇಡ.

"ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಮ್"

ನಿನ್ನ ಪಾಪಗಳು ಕ್ಷಯಿಸಿ ಶ್ರೇಯಸ್ಸುಂಟಾಗಲು ನಿಷ್ಕಾಮದಿಂದ ಸಾತ್ವಿಕವಾಗಿ ದೇವರನ್ನು ಆರಾಧಿಸುವುದನ್ನೂ, ಅನ್ಯೋನ್ಯ ಸಹಾಯಕವಾಗಿರುವ ದೇವತೆಗಳ ಪಿತೃದೇವತೆಗಳ ಆರಾಧನಾರೂಪವಾದ ಕರ್ಮಗಳ ಮಾಡುವಿಕೆಯನ್ನು ಮರೆಯಬಾರದು.

"ಮಾತೃದೇವೋ ಭವ" ಮಾತೆಯಲ್ಲಿ ದೇವತಾಭಾವವನ್ನಿಟ್ಟು ಸೇವೆ ಮಾಡು.

**"ಪಿತೃದೇವೋ ಭವ"** ತಂದೆಯಲ್ಲಿ ದೇವತಾಭಾವವನ್ನಿಟ್ಟು ಸೇವೆಮಾಡು.

**"ಆಚಾರ್ಯದೇವೋ ಭವ"** ಗುರುವಿನಲ್ಲಿ ದೇವತಾಭಾವವನ್ನಿಟ್ಟು ಸೇವೆ ಮಾಡು.

**"ಅತಿಥಿದೇವೋ ಭವ"** ಅತಿಥಿಗಳಲ್ಲಿ ದೇವತಾಭಾವವನ್ನಿಟ್ಟು ಸತ್ಕರಿಸು.

**"ಯಾನ್ಯ ನವದ್ಯಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ । ನೋ ಇತರಾಣಿ"**

ಯಾವ ಕರ್ಮಗಳು ನಿಂದಿತವಲ್ಲವೋ ಮತ್ತು ಶಿಷ್ಟರು ಆಚರಿಸುವರೆಂಬ ಪ್ರಮಾಣದಿಂದ ಉತ್ತಮವಾದವುಗಳೆಂದು ತಿಳಿಯತಕ್ಕವುಗಳೊ ಅಂತಹವುಗಳನ್ನು ನೀನು ಆಚರಿಸಬೇಕು. ಶಾಸ್ತ್ರನಿಷಿದ್ಧವಾಗಿ ಸದಾಚಾರವೆಂಬ ನೆಪದಿಂದ ಶಿಷ್ಟರು ಮಾಡಿದರೂ ಅಂತಹವುಗಳನ್ನು ಮಾಡಬೇಡ. ಅಂದರೆ ವೇದವೇ ಮುಂತಾದ ಶಾಸ್ತ್ರಗಳಿಗೆ ವಿರುದ್ಧವಲ್ಲದ ನಡೆವಳಿಕೆಗಳು ಮತ್ತು ಕರ್ಮಗಳು ಯಾವವೋ ಅವುಗಳನ್ನೇ ನೀನು ಆಚರಿಸಬೇಕು. ವಿರುದ್ಧವಾದವುಗಳನ್ನು ಮಾಡತಕ್ಕದ್ದಲ್ಲ.

**"ಯಾನ್ಯಸ್ಮಾಕಗ್ಂ ಸುಚರಿತಾನಿ । ತಾನಿ ತ್ವಯೋಪಾಸ್ಯಾನಿ । ನೋ ಇತರಾಣಿ । ಯೇ ಕೇ ಚಾಸ್ಮಚ್ಛ್ರೇಯಾಗ್ಂ ಸೋ ಬ್ರಾಹ್ಮಣಾಃ । ತೇಷಾಂ ತ್ವಯಾಽಽಸನೇನ ಪ್ರಶ್ವಸಿತವ್ಯಮ್ ।"**

ಆಚಾರ್ಯತ್ವವೇ ಮುಂತಾದ ಗುಣಗಳಿಂದ ನಮಗಿಂತಲೂ ಶ್ರೇಷ್ಠರಾದ ಬ್ರಾಹ್ಮಣರಲ್ಲಿ ಗೌರವ ಮತ್ತು ವಿಶ್ವಾಸಗಳನ್ನಿಟ್ಟು ಅವರು ನಿನ್ನಲ್ಲಿಗೆ ಬಂದಾಗ ಆಯಾಸಪರಿಹರವಾಗುವಂತೆ ಮೃದುನುಡಿಗಳಿಂದ ಆಸನವನ್ನು ಕೊಟ್ಟು ಕೂರಿಸಬೇಕು. ನೀನು ಮೌನದಿಂದ ಇದ್ದು ಅವರು ನಿನಗೆ ಏನು ಹೇಳುವರೊ ಆದರ ಸಾರವನ್ನು ಗ್ರಹಿಸಬೇಕಲ್ಲದೆ ನೀನು ಅವರಲ್ಲಿ ಚರ್ಚೆಗೆ ಹೋಗಬಾರದು.

**ಶ್ರದ್ಧಯಾ ದೇಯಮ್ । ಅಶ್ರದ್ಧಯಾಽದೇಯಮ್ ।**
**ಶ್ರಿಯಾ ದೇಯಮ್ । ಹ್ರಿಯಾ ದೇಯಮ್ ।**
**ಭಿಯಾ ದೇಯಮ್ । ಸಂವಿದಾ ದೇಯಮ್ ।**

ದಾನವನ್ನು ಅಥವಾ ದಾನವಲ್ಲದೆ ಕೊಡತಕ್ಕದ್ದು ಯಾವುದಾದರೂ ಇದ್ದಗೂ ಅವುಗಳನ್ನು ಶ್ರದ್ಧೆಯಿಂದಲೂ ಆದರದಿಂದಲೂ ಕೊಡಬೇಕು. ಅಶ್ರದ್ಧೆಯಿಂದಲೂ

ಅನಾದರಣೆಯಿಂದಲೂ ಕೊಡಬಾರದು. ಶ್ರಿಯಾ ಎಂದರೆ ತನ್ನಲ್ಲಿರುವ ಸಂಪತ್ತಿಗೆ ತಕ್ಕಂತೆ ಕೊಡಬೇಕು. ವಿನಯದಿಂದಲೂ ನಾಚಿಕೆಯಿಂದಲೂ ಕೊಡಬೇಕು. ಭಯ ದಿಂದಲೂ ಕೊಡಬೇಕು. ಸ್ನೇಹಿತನ ಕಾರ್ಯವೆಂಬ ಭಾವನೆಯಿಂದ ಕೊಡಬೇಕು.

**ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ ವೃತ್ತಚಿಕಿತ್ಸಾ**
**ವಾ ಸ್ಯಾತ್ । ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ ।**
**ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಃ ಸ್ಯುಃ ।**
**ಯಥಾ ತೇ ತತ್ರ ವರ್ತೇರನ್ । ತಥಾ ತತ್ರ ವರ್ತೇಥಾಃ ।**

ದೇವತಾ ಕರ್ಮಗಳ ವಿಚಾರಗಳಲ್ಲಾಗಲಿ, ಆಚರಣೆಯಲ್ಲಾಗಲಿ ಜ್ಞಾನ ಮಾರ್ಗದ ವಿಚಾರದಲ್ಲಾಗಲಿ, ಪ್ರಪಂಚ ವ್ಯವಹಾರದ ನಡೆವಳಿಕೆಗಳಲ್ಲಾಗಲಿ ನಿನ್ನ ಮನಸ್ಸಿನಲ್ಲಿ ಸಂಶಯವು ಉಂಟಾದರೆ ಆ ಕಾಲದಲ್ಲಿ ಆದೇಶದಲ್ಲಿ ಆಯಾ ವಿಷಯಗಳಲ್ಲಿ ಒಳ್ಳೇ ವಿಚಾರಮಾಡುವುದರಲ್ಲಿ ಸಮರ್ಥರಾಗಿಯೂ, ಕರ್ಮದಲ್ಲಿ ಜ್ಞಾನದಲ್ಲಿ ನಡತೆ ಯಲ್ಲಿ ನಿಪುಣರಾಗಿಯೂ, ಮತ್ತೊಬ್ಬರಿಂದ ಪ್ರೇರಿತರಾಗದೆ ಏಕಾಗ್ರಚಿತ್ತವುಳ್ಳವ ರಾಗಿಯೂ, ದಯಾಶೀಲರಾಗಿಯೂ ಆಸೆ ಇಲ್ಲದೆ ಧರ್ಮೇಚ್ಛೆಯುಳ್ಳವರಾಗಿಯೂ, ಇರುವ ಬ್ರಾಹ್ಮಣರು ಆ ಸಂದರ್ಭಗಳಲ್ಲಿ ಹೇಗೆ ವರ್ತಿಸುವರೋ ಹಾಗೆ ನೀನೂ ವರ್ತಿಸು.

**ಅಥಾಭ್ಯಾಖ್ಯಾತೇಷು । ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ ।**
**ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಃ ಸ್ಯುಃ ।**
**ಯಥಾ ತೇ ತೇಷು ವರ್ತೇರನ್ । ತಥಾ ತೇಷು ವರ್ತೇಥಾಃ ।**

ಪ್ರಸಿದ್ಧವಾದ ದೋಷಯುಕ್ತರು ಮತ್ತು ದುಷ್ಟರ ವಿಚಾರದಲ್ಲಿ ಆ ಕಾಲದಲ್ಲಿ ಆ ದೇಶದಲ್ಲಿ ಆಯಾ ವಿಷಯಗಳಲ್ಲಿ ಒಳ್ಳೇ ವಿಚಾರಮಾಡುವುದರಲ್ಲಿ ಸಮರ್ಥ ರಾಗಿಯೂ ಕರ್ಮದಲ್ಲಿ ಜ್ಞಾನದಲ್ಲಿ ನಡತೆಯಲ್ಲಿ ನಿಪುಣರಾಗಿಯೂ ಮತ್ತೊಬ್ಬರಿಂದ ಪ್ರೇರಿತರಾಗದೆ ಏಕಾಗ್ರಚಿತ್ತವುಳ್ಳವರಾಗಿಯೂ ದಯಾಶೀಲರಾಗಿಯೂ ಆಸೆ ಇಲ್ಲದೆ ಧರ್ಮೇಚ್ಛೆಯುಳ್ಳವರಾಗಿಯೂ ಇರುವ ಬ್ರಾಹ್ಮಣರು ಆ ಸಂದರ್ಭದಲ್ಲಿ ಹೇಗೆ ನಡೆದು ಕೊಳ್ಳುವರೊ ಹಾಗೆಯೆ ನೀನೂ ನಡೆಯಬೇಕು.

**ಏಷ ಆದೇಶಃ । ಏಷ ಉಪದೇಶಃ । ಏಷಾ ವೇದೋಪನಿಷತ್ ।**
**ಏತದನುಶಾಸನಮ್ । ಏವಮುಪಾಸಿತವ್ಯಮ್ । ಏವಮುಚೈತದು**
**ಪಾಸ್ಯಮ್ ।**

ಇದುವರಿಗೂ ತಿಳಿಸಲ್ಪಟ್ಟಿರುವುವುಗಳು ನಿಯಮಿಸಲ್ಪಟ್ಟ ಸಿದ್ಧಾಂತಗಳು.

ಇದು ಪುತ್ರರಿಗೆ ತಂದೆ ಮತ್ತು ಹಿತೈಷಿಗಳು ಮಾಡುವ ಉಪದೇಶವು. ಇದೇ ವೇದಾರ್ಥವು. ಇದೇ ವೇದರಹಸ್ಯವು. ಇದು ಆಜ್ಞಾರೂಪಕವಾದ ಈಶ್ವರ ವಚನವು. ಮೇಲೆ ತಿಳಿಸಿರುವುವುಗಳಂತೆ ಉಪಾಸನೆ ಮಾಡಬೇಕೆಂದರೆ ಅವುಗಳಂತೆ ಆಚರಿಸಬೇಕು. ಮೇಲೆ ತಿಳಿಸಿರುವುವುಗಳಂತೆ ನಡೆದುಕೊಳ್ಳಲೇಬೇಕು. ಅಂದರೆ ಈ ವಾಕ್ಯ ನಡೆದುಕೊಳ್ಳಲೇಬೇಕೆಂಬ ಆಜ್ಞಾರೂಪವಾದುದು.

## ಶಿಕ್ಷಾವಲ್ಲಿ, ಆನಂದವಲ್ಲಿ, ಭೃಗುವಲ್ಲಿಗಳಲ್ಲಿರುವ ತತ್ವಗಳ ವಿಂಗಡನೆ

ವೇದಗಳಲ್ಲಿರುವ ತತ್ವಗಳನ್ನು **"ಅಥಾತೋ ಧರ್ಮ ಜಿಜ್ಞಾಸಾ' 'ಅಥಾತೋ ಬ್ರಹ್ಮ ಜಿಜ್ಞಾಸಾ"** ಎಂದರೆ ಕರ್ಮ ಮತ್ತು ಜ್ಞಾನಕಾಂಡಗಳೆಂಬ ಎರಡು ಭಾಗಗಳಾಗಿ ವಿಂಗಡಿಸಿದೆ. ಧರ್ಮಜಿಜ್ಞಾಸದಲ್ಲಿ ದೇವತಾಕರ್ಮಗಳ ವಿಚಾರ ಮತ್ತು ಪ್ರಪಂಚದ ನಡವಳಿಕೆಗಳಲ್ಲಿ ಧರ್ಮಮಾರ್ಗಾವಲಂಬಿಗಳಾಗಿರಬೇಕೆಂಬ ವಿಚಾರಗಳು ಬರುವುವು. ಬ್ರಹ್ಮಜಿಜ್ಞಾಸದಲ್ಲಿ ಬ್ರಹ್ಮಬೋಧಕವಾದ ವೇದಾರ್ಥವಿಚಾರಗಳನ್ನು ಗುರುವಿನಲ್ಲಿ ಶ್ರವಣಮಾಡಿ ತಾನು ಅದನ್ನು ಅನುಷ್ಠಿಸಿ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದುವ ವಿಚಾರಗಳು ಬರುವುವು.

ನಾಲಕ್ಕು ವೇದಗಳ ತತ್ವಗಳನ್ನು ಅನುಸರಿಸಿ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳೆಂದು ಶಾಸ್ತ್ರವು ನಿರ್ಣಯಿಸಿದೆ. ಈ ಚತುರ್ವಿಧ ಪುರುಷಾರ್ಥಗಳಲ್ಲಿ ಮುಖ್ಯವಾಗಿ ಸಂಪಾದಿಸಬೇಕಾದುದು ಮೋಕ್ಷ. ಈ ಮುಖ್ಯ ಗುರಿಯಾದ ಮೋಕ್ಷವನ್ನು ಹೊಂದಲು ಸಹಕಾರಿಯಾಗಿರುವಂತೆ ಇರುವ ಈಶ್ವರಾರಾಧನರೂಪವಾದ ಕರ್ಮ ಮತ್ತು ಲೋಕವ್ಯಾಪಾರದ ನಡವಳಿಕೆಗಳೇ ಧರ್ಮವೆನಿಸುವುವು. ಮೋಕ್ಷದ ಗುರಿಗೆ ವ್ಯತಿರಿಕ್ತವಾದ ನಡವಳಿಕೆಗಳೇ ಅಧರ್ಮ. ಮೋಕ್ಷದ ಗುರಿಗೆ ಸಹಕಾರಿಯಾಗಿಯೂ ಧರ್ಮಮಾರ್ಗಕ್ಕೆ ಅನುಸಾರವಾಗಿಯೂ ಅರ್ಥವೆಂದರೆ ಧನವನ್ನು ಸಂಪಾದಿಸಬೇಕು. ಹೀಗೆ ಸಂಪಾದಿಸಿದ ಧನವನ್ನು ಮೋಕ್ಷದಗುರಿ, ಧರ್ಮದ ಕಟ್ಟಳೆಗಳಿಗೆ ಮೀರದಂತೆ ಖರ್ಚುಮಾಡಿ ಕಾಮವೆಂದರೆ ಭೋಗಿಸಬೇಕು. ಮನುಷ್ಯನಿಗೆ ಈ ನಾಲಕ್ಕು ಕಟ್ಟಳೆಯಲ್ಲಿರುವುದು ಬಹುಶ್ರೇಷ್ಠವೂ ಮುಖ್ಯವೂ ಆದುದರಿಂದ ಚತುರ್ವಿಧ ಪುರುಷಾರ್ಥವೆಂದು ಶಾಸ್ತ್ರವು ತಿಳಿಸುವುದು.

ಈ ಉಪನಿಷತ್ತಿನ ಶಿಕ್ಷಾವಲ್ಲಿಯಲ್ಲಿ ಧರ್ಮ–ಅರ್ಥ–ಕಾಮ–ಮೋಕ್ಷವೆಂಬ ಚತುರ್ವಿಧ ಪುರುಷಾರ್ಥಗಳೂ ಉಪದೇಶಿಸಲ್ಪಟ್ಟಿರುತ್ತವೆ. ೧–೨–೩–೪–೯–೧೧ನೇ ಅನುವಾಕಗಳ ಮಂತ್ರಗಳು ಸನ್ಮಾರ್ಗ ಪ್ರವರ್ತನೆಯಲ್ಲಿದ್ದುಕೊಂಡು ಈಶ್ವರಾರಾಧನೆಮಾಡುತ್ತಾ ಧರ್ಮಾರ್ಥ ಕಾಮಗಳನ್ನು ಅನುಭವಿಸಬೇಕೆಂಬುದನ್ನು ಉಪದೇಶಿಸುತ್ತವೆ. ಈ ಉಪ

ನಿಷತ್ತಿನಲ್ಲಿ ಬೋಧಿಸಿರುವ ಜ್ಞಾನಮಾರ್ಗದ ಗಹನವಿಚಾರಗಳನ್ನು ವಿಶದೀಕರಿಸುವುದೇ ಈ ಗ್ರಂಥದ ಬರವಣಿಗೆಯ ಧ್ಯೇಯವಾಗಿರುವುದರಿಂದ ಈ ಜ್ಞಾನಮಾರ್ಗಕ್ಕೆ ಸಂಬಂಧ ಪಟ್ಟ ಶಿಕ್ಷಾವಲ್ಲಿಯ ೫-೬-೭-೮-೯-೧೦ನೇ ಅನುವಾಕಗಳ ಮಂತ್ರಗಳ ತತ್ವಗಳನ್ನು ವಿಶದವಾಗಿ ವಿವರಿಸಿದೆ. ಹೀಗೆ ವಿವರಿಸಿರುವುದರಲ್ಲಿ ಆನಂದವಲ್ಲಿ ಭೃಗುವಲ್ಲಿಗಳಲ್ಲಿರುವ ಜ್ಞಾನಮಾರ್ಗದ ತತ್ವಗಳನ್ನೂ ಸೇರಿಸಿಕೊಂಡು ವಿವರಿಸಿರುವುದು.

ಶಿಕ್ಷಾವಲ್ಲಿಯಲ್ಲಿ ಇರುವ ಅತಿಶಯವಾದ ವಿಚಾರವೇನೆಂದರೆ, ಪ್ರಾರಂಭದಿಂದ ಕೊನೆಯವರೆಗೂ ನಾದಬ್ರಹ್ಮದ ಮಹಿಮೆಯೇ ಪ್ರತಿಪಾದಿಸಲ್ಪಟ್ಟಿದೆ. ವಾಕ್ಕು ಮತ್ತು ವೇದಾಧ್ಯಯನಕ್ಕೆ ಅಸ್ತಿಭಾರದಂತೆ ಇರುವ ವರ್ಣ, ಸ್ವರ, ಮಾತ್ರ ಮುಂತಾದ ಉಚ್ಚಾರಣೆಯ ಶಾಸ್ತ್ರದ ವಿಚಾರದಿಂದಲೇ ಪ್ರಾರಂಭವಾಗಿದೆ. ಅನಂತರ ಸಂಹಿತೋ ಪಾಸನೆಯೆಂದರೆ ವೇದಗಾನಸ್ವರೂಪವಾದ ನಾದಬ್ರಹ್ಮದ ಮಹಿಮಾ ವಿಚಾರವು ಬಂದಿರು ವುದು. ಅನಂತರ ಸಗುಣ ಬ್ರಹ್ಮವೆನಿಸುವ ಓಂಕಾರಸ್ವರೂಪನಾದ ಈಶ್ವರನ ಅನು ಗ್ರಹವನ್ನು ಸಂಪಾದಿಸಬೇಕೆಂಬ ವಿಚಾರವು ಬಂದಿರುವುದು. ತದನಂತರ ಬಿಂದು ನಾದ ಕಳಾರೂಪವಾದ ಓಂಕಾರ ನಾದಬ್ರಹ್ಮದ ಮೂಲಕ ಓಂಕಾರರೂಪವಾದ ಬ್ರಹ್ಮಸಾಕ್ಷಾ ತ್ಕಾರವನ್ನು ಹೊಂದುವ ವಿಚಾರವು ಬಂದಿರುವುದು. ಆದುದರಿಂದ ಶಿಕ್ಷಾವಲ್ಲಿಯಲ್ಲಿ ಪ್ರಾರಂಭದಿಂದ ಅಂತ್ಯದವರೆಗೂ ನಾದಬ್ರಹ್ಮದ ಮಹಿಮೆಯೇ ಇರುವುದು. ಅಲ್ಲದೆ ವೇದಾಧ್ಯಯನ ಮೊದಲುಗೊಂಡು ಸನ್ಮಾರ್ಗದ ನಡೆವಳಿಕೆ, ದೇವತಾಕರ್ಮ, ವಿರಕ್ತಿ, ಯೋಗ ಮತ್ತು ಜ್ಞಾನಸಾಧನೆಗಳಿಂದ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವವರಿಗೆ ಶಿಷ್ಯನು ಗುರುವಿನಿಂದ ಶಿಕ್ಷಿತನಾಗುವ ಸರ್ವವಿಚಾರಗಳೂ ಈ ವಲ್ಲಿಯಲ್ಲಿ ಅಡಗಿರು ವುದರಿಂದ ಈ ವಲ್ಲಿಗೆ ಶಿಕ್ಷಾವಲ್ಲಿಯೆಂಬ ನಾಮಾಂಕಿತವು ಬಹುಮುದ್ದಾಗಿ ಅನ್ವಯ ವಾಗುವುದು.

ಆನಂದವಲ್ಲಿಯ ಒಂದನೇ ಅನುವಾಕದ "**ಬ್ರಹ್ಮವಿದಾಪ್ನೋತಿ ಪರಮ್**" ಎಂಬ ಮಂತ್ರವನ್ನು ವಿದೇಹಮುಕ್ತಿಯ ತತ್ವಕ್ಕೆ ಅನ್ವಯಮಾಡಿಯೂ, ಎಂಟನೇ ಅನು ವಾಕದ ಐದನೇ ಮಂತ್ರವಾದ "**ಸ ಯ ಏವಂವಿತ್। ಅಸ್ಮಾಲ್ಲೋಕಾತ್ ಪ್ರೇತ್ಯ।**" ಎಂಬ ಮಂತ್ರವನ್ನೂ ಮತ್ತು ಒಂಭತ್ತನೆಯ ಅನುವಾಕದ "**ಯತೋ ವಾಚೋ ನಿವರ್ತಂತೇ**" ಎಂಬ ಮಂತ್ರವನ್ನೂ ಜೀವನ್ಮುಕ್ತಿಯ ತತ್ವಕ್ಕೆ ಅನ್ವಯಮಾಡಿಯೂ ಬರೆದಿರುವುದು. ಆನಂದವಲ್ಲಿಯಲ್ಲಿರುವ ಬ್ರಹ್ಮದ ಅಸ್ತಿತ್ವವನ್ನು ಪ್ರತಿಪಾದಿಸುವ ಕೆಲವು ಮಂತ್ರಗಳ ವಿಚಾರವು ಭಾಷ್ಯದಿಂದಲೇ ಸುಲಭವಾಗಿ ತಿಳಿದುಕೊಳ್ಳಬಹುದು.

ಆನಂದವಲ್ಲಿಯಲ್ಲಿ ಉಳಿಕೆಯಾದ ಮಂತ್ರಗಳೂ ಭೃಗುವಲ್ಲಿಯ ಕೆಲವು ಮಂತ್ರ ಗಳೂ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದ ಮಯ ಈ ಐದು ಕೋಶಗಳ ವಿಚಾರಗಳನ್ನು ತಿಳಿಸುವುವು. ಈ ಐದು ಕೋಶಗಳ

ತತ್ವಗಳನ್ನೂ ವ್ಯಾಹೃತಿಗಳ ತತ್ವವಾದ ಓಂಕಾರೋಚ್ಚಾರಣೆಯಿಂದ ಅನುಷ್ಠಿಸುವ ಧ್ಯಾನದ ಸೋಪಾನದಲ್ಲಿ ವಿವರಿಸಿದೆ. ಆದುದರಿಂದ ಪ್ರತ್ಯೇಕವಾಗಿ ತಿಳಿಸಬೇಕಾದ ಅವಶ್ಯಕತೆ ಇಲ್ಲ.

ಜ್ಞಾನಮಾರ್ಗಕ್ಕೆ ಸಾತ್ವಿಕವಾದ ಕರ್ಮಮಾರ್ಗವು ಸಹಾಯಕವಾದುದೇ ವಿನಹ ಕರ್ಮಮಾರ್ಗವೇ ಮೋಕ್ಷವನ್ನು ಕೊಡಲಾರದು. ಈಶ್ವರಾರಾಧನಾರೂಪ ವಾದ ಸಾತ್ವಿಕಕರ್ಮವು ನಮ್ಮ ಪಾಪಗಳನ್ನು ಕ್ಷಯಿಸಿ ಜ್ಞಾನಮಾರ್ಗಕ್ಕೆ ಸಹಾಯಕ ವಾಗುವುದು. "ಅಗ್ನಿಹೋತ್ರವೇ ಮುಂತಾದವುಗಳು ಮಾತ್ರ ಕರ್ಮವಲ್ಲ. ಜ್ಞಾನಕ್ಕೆ ಸಾಧನೆಯಾದ ಆತ್ಮವಿಚಾರದ ಶ್ರವಣ, ಮನನ, ನಿದಿಧ್ಯಾಸವೆಂದರೆ–ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣಗಳ ಅನುಷ್ಠಾನಗಳು, ಬ್ರಹ್ಮಚರ್ಯ, ತಪಸ್ಸು, ಯಮ, ನಿಯಮ, ಶಮ, ದಮ, ಅಹಿಂಸೆ ಮುಂತಾದವುಗಳೂ ಕರ್ಮಗಳೇ ಆಗಿರುತ್ತವೆ. ಈ ಕರ್ಮಗಳು ಜ್ಞಾನಕ್ಕೆ ಹೆಚ್ಚು ಸಾಧಕವಾಗಿರುತ್ತವೆಯಾದುದರಿಂದ ಮುಮುಕ್ಷು ವಾದವನು ಈ ಕರ್ಮಗಳಿಗೆ ಹೆಚ್ಚು ಗಮನವನ್ನು ಕೊಡಬೇಕು." ಎಂದು ಶ್ರೀ ಶಂಕರ ಭಗವತ್ಪಾದಾಚಾರ್ಯರವರು ಶಿಕ್ಷಾವಲ್ಲಿಯ ಭಾಷ್ಯದಲ್ಲಿ ಬರೆದಿರುವರು. ಆದುದರಿಂದ ಮೋಕ್ಷಾಭಿಲಾಷಿಯು ಮೋಕ್ಷಕ್ಕೆ ಮುಖ್ಯಸಹಾಯಕವಾಗಿರುವ ಈ ಕರ್ಮಗಳಿಗೆ ಹೆಚ್ಚು ಗಮನಕೊಡತಕ್ಕದ್ದು ಅವಶ್ಯಕವಾದುದು.

ಮೋಕ್ಷವನ್ನು ಪಡೆಯಬೇಕೆಂಬ ಬುದ್ಧಿಯಜ್ಞಾನಕ್ಕೆ ವೈರಾಗ್ಯ ಮತ್ತು ಯೋಗದ ಸಹಾಯಗಳು ಅತ್ಯವಶ್ಯಕವಾಗಿ ಬೇಕು. ಪ್ರಾಪಂಚಿಕ ವಿಷಯಾದಿ ಗಳಲ್ಲೂ ಕಾರ್ಯಗಳಲ್ಲೂ ಮನಸ್ಸು ವಿರಕ್ತಿಯನ್ನು ಹೊಂದಿ ಪರಮಾತ್ಮಸಾಕ್ಷಾತ್ಕಾರ ವನ್ನು ಪಡೆಯಬೇಕೆಂಬ ಸ್ವಾರ್ಥತೆಯೊಂದನ್ನೇ ಪ್ರಬಲವಾಗಿ ಹೊಂದಿರಬೇಕು. ಶಿಕ್ಷಾವಲ್ಲಿಯಲ್ಲೂ ಆನಂದವಲ್ಲಿಯಲ್ಲೂ ಭೃಗುವಲ್ಲಿಯಲ್ಲೂ ವೈರಾಗ್ಯದ ವಿಚಾರವು ಇದ್ದೇ ಇರುವುದು. ಶಿಕ್ಷಾವಲ್ಲಿಯಲ್ಲಿರುವ ಸ್ವಾರಾಜ್ಯವೆಂಬ ಮೋಕ್ಷಪದವಿಯನ್ನು ಹೊಂದಬೇಕಾದಲ್ಲಿ. ವಿಷಯಾದಿಗಳಲ್ಲಿ ವೈರಾಗ್ಯವಿಲ್ಲದಿದ್ದರೆ ಸಾಧ್ಯವೇಇಲ್ಲ. ಆನಂದವಲ್ಲಿಯಲ್ಲೂ ಭೃಗುವಲ್ಲಿಯಲ್ಲೂ ತಿಳಿಸುವ ಅನ್ನಮಯಾದಿ ಪಂಚಕೋಶ ಗಳನ್ನೂ ದಾಟಿ ಆನಂದರೂಪನಾದ ಪರಬ್ರಹ್ಮಸಾಕ್ಷಾತ್ಕಾರವನ್ನು ಪಡೆಯಬೇಕಾದರೂ ವಿಷಯಗಳಲ್ಲಿ ವೈರಾಗ್ಯವಿಲ್ಲದಿದ್ದರೆ ಪಂಚಕೋಶಗಳನ್ನು ದಾಟಲು ಸಾಧ್ಯವಾಗುವುದಿಲ್ಲ.

ಪ್ರಪಂಚದ ವಿಷಯಗಳಲ್ಲಿ ಹೊಂದುವ ಆನಂದಕ್ಕಿಂತಲೂ ಆಧ್ಯಾತ್ಮಿಕ ಸಾಧನ ಸಂಪತ್ತಿನಲ್ಲಿ ಹೊಂದುವ ಆನಂದವು ಶ್ರೇಷ್ಠವಾದುದೆಂತಲೂ, ಈ ಆಧ್ಯಾತ್ಮಿಕ ಸಾಧನ ಸಂಪತ್ತನ್ನು ಹತ್ತು ಸೋಪಾನಗಳಾಗಿ ವಿಂಗಡಿಸಿ ಒಂದೊಂದು ಸೋಪಾನಕ್ಕೂ ಆನಂದವು ನೂರರಷ್ಟು ಹೆಚ್ಚುತ್ತಾಬಂದು ಕೊನೆಯದೇ ಬ್ರಹ್ಮಾನಂದವೆಂದೂ ಆನಂದ ವಲ್ಲಿಯ ಮಂತ್ರದ ಶ್ರೀ ಶಂಕರಭಗವತ್ಪಾದಾಚಾರ್ಯರವರ ಭಾಷ್ಯವು ತಿಳಿಸುವುದು. ಈ ಹತ್ತು ಸೋಪಾನಗಳಲ್ಲೂ "ಶ್ರೋತ್ರಿಯಸ್ಯಚಾಕಾಮಹತಸ್ಯ" ಎಂಬ ಮಂತ್ರವು

ಇರುವುದು. ಶ್ರೋತ್ರಿಯನೆಂದರೆ ಪರಬ್ರಹ್ಮನನ್ನು ಹೊಂದಬೇಕೆಂಬ ಜ್ಞಾನವುಳ್ಳವನು ಶ್ರೋತ್ರಿಯನು. ಅಕಾಮಹತಸ್ಯ ಎಂದರೆ ವಿಷಯ ಕಾಮನೆಗಳನ್ನು ಜೈಸಿದ ವಿರಕ್ತನು. ಉಪನಿಷತ್ತಿನಲ್ಲಿ ತಿಳಿಸಿರುವ ಹತ್ತು ಸೋಪಾನಗಳಲ್ಲಿ ಹಿಂದು ಹಿಂದಿನ ಅಂತಸ್ತಿಗಿಂತ ಮುಂದು ಮುಂದಿನ ಅಂತಸ್ತುಗಳನ್ನು ಹತ್ತಬೇಕಾದರೆ ಅಧಿಕಾರಿಯಲ್ಲಿ ವಿಷಯಾದಿ ಗಳಕಡೆ ವಿರಕ್ತಿಯೂ ಪರಮಾತ್ಮನನ್ನು ಹೊಂದಬೇಕೆಂಬ ಜ್ಞಾನವೂ ಅಧಿಕವಾಗುತ್ತಾ ಬರಬೇಕು. ಇದರಿಂದ ಅಂತಸ್ತು ಅಂತಸ್ತಿಗೂ ಅಂತಃಕರಣವು ನಿರ್ಮಲವಾಗುವುದ ರಿಂದ ಆನಂದವು ನೂರರಷ್ಟು ಹೆಚ್ಚುವುದೆಂದು ಶ್ರೀ ಶಂಕರಭಗವತ್ಪಾದಾಚಾರ್ಯರವರು ಭಾಷ್ಯದಲ್ಲಿ ಬರೆದಿರುತ್ತಾರೆ. ಆದುದರಿಂದ ಜ್ಞಾನವೈರಾಗ್ಯಗಳನ್ನು ಹೊಂದಿ ಅವು ಗಳನ್ನು ಅಭಿವೃದ್ಧಿಪಡಿಸಿಕೊಳ್ಳುವ ವಿಚಾರವೂ ಈ ಉಪನಿಷತ್ತಿನಲ್ಲಿ ಇದ್ದೇ ಇರು ವುದು.

ಪರಬ್ರಹ್ಮಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ಬುದ್ಧಿಯ ಜ್ಞಾನಕ್ಕೆ ಪಂಚ ಪ್ರಾಣಗಳ ಸಹಾಯವೆಂದರೆ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣೆಗಳ ಕಾರ್ಯವಾದ ಯೋಗದ ಸಹಾಯವು ಅತ್ಯವಶ್ಯಕವಾಗಿ ಬೇಕು. ಶ್ವಾಸೋಚ್ಛ್ವಾಸವು ಸ್ತಿಮಿತದಲ್ಲಿ ನಿಂತಲ್ಲದೆ ಬುದ್ಧಿಮನಸ್ಸುಗಳು ಬಹಿರ್ಮುಖವಾಗಿರುವ ಇಂದ್ರಿಯಗಳನ್ನು ಅಂತರ್ಮುಖಕ್ಕೆ ತಿರುಗಿಸಿಕೊಂಡು ಪರಬ್ರಹ್ಮಧ್ಯಾನದಲ್ಲಿ ನಿರತವಾಗಲಾರವು. ಬುದ್ಧಿಯ ಜ್ಞಾನಕ್ಕೆ ಯೋಗದ ಸಹಾಯದ ಆವಶ್ಯಕತೆಯು ಶಿಕ್ಷಾವಲ್ಲಿಯಲ್ಲಿ ಇದ್ದೇ ಇರುವುದು. ಭೃಗುವಲ್ಲಿಯಲ್ಲೂ ಭೃಗುವು ಅನ್ನಮಯಾದಿ ಐದು ಕೋಶಗಳನ್ನೂ ದಾಟಿ ಆನಂದ ರೂಪವಾದ ಪರಬ್ರಹ್ಮತ್ವವನ್ನು ಪಡೆಯಲು ತಪಸ್ಸುಮಾಡಿದನು. ತಪಸ್ಸೆನ್ನುವುದು ಧ್ಯಾನಯೋಗಾನುಷ್ಠಾನವೆಂದು ಶಿಕ್ಷಾವಲ್ಲಿಯ ೯ನೇ ಅನುವಾಕದಲ್ಲೇ ವಿವರಿಸಿದೆ.

ಶಿಕ್ಷಾವಲ್ಲಿ ಆನಂದವಲ್ಲಿ ಭೃಗುವಲ್ಲಿಗಳಲ್ಲಿ ಇರತಕ್ಕ ತತ್ವಗಳನ್ನು ಕರ್ಮ , ಜ್ಞಾನ, ವೈರಾಗ್ಯ, ಯೋಗಗಳಾದ ನಾಲಕ್ಕು ತತ್ವಗಳಿಗೂ ವಿಂಗಡಿಸಿ ತಕ್ಕಮಟ್ಟಿಗೆ ಈ ಪ್ರಕರಣದಲ್ಲಿ ತಿಳಿಸಿತು. ಅಲ್ಲದೆ ಈ ಉಪನಿಷತ್ತಿನಲ್ಲಿ ಯಾವ ಯಾವ ತತ್ವವಿಚಾರ ಗಳು ಇರುವುವೊ ಅವನ್ನು ಗ್ರಂಥದ ಪ್ರಥಮದಲ್ಲಿ ವಿಷಯಾನುಕ್ರಮಣಿಕೆಯಲ್ಲಿ ಕೊಟ್ಟಿದೆ. ಈ ವಿಷಯಾನುಕ್ರಮಣಿಕೆಯಂತೆ ವಿಚಾರಗಳನ್ನು ವಿಂಗಡಿಸಿ ವಿವರಿಸಿರು ವುದು. ತತ್ವವಿಚಾರಗಳನ್ನು ವಿಶೇಷವಾಗಿ ಲಂಬಿಸದೆ ಕ್ರೋಢೀಕರಿಸಿ ಬರೆದಿರುವುದು. ವಿಚಾರಪರರು ಬರೆದಿರುವ ತತ್ವಗಳನ್ನು ಆಧಾರವಾಗಿಟ್ಟುಕೊಂಡು ಶ್ರೀಶಂಕರಭಗವ ತ್ಪಾದಾಚಾರ್ಯರವರ ಇತರ ಗ್ರಂಥಗಳ ಸಹಾಯದೊಡನೆ ತತ್ವವನ್ನು ಇನ್ನೂ ವಿವರ ವಾಗಿ ತಿಳಿದುಕೊಳ್ಳಲು ಅವಕಾಶವಿದೆ. ಶ್ರೀಶಂಕರಭಗವತ್ಪಾದಾಚಾರ್ಯರವರು ಉಪ ನಿಷತ್ತಿಗೆ ಬರೆದಿರುವ ಭಾಷ್ಯದಲ್ಲಿ ಗೂಢವಾಗಿರತಕ್ಕ ಅಮೋಘವಾದ ವಿಚಾರಗಳನ್ನು

ಹೊರಸೂಸಿ ನನಗೆ ತಿಳಿದಮಟ್ಟಿಗೆ ಬರೆಯುವುದೇ ಈ ನನ್ನ ಬರವಣಿಗೆಯ ಉದ್ದೇಶ ವಾಗಿದೆ.

ಎಲ್ಲಾ ಉಪನಿಷತ್ತುಗಳಿಗಿಂತಲೂ ತೈತ್ತಿರೀಯೋಪನಿಷತ್ ಶಿಕ್ಷಾವಲ್ಲಿಯು ಶ್ರೇಷ್ಠವಾದುದೆಂದು ಹೇಳಬಹುದು. ಕಾರಣವೇನೆಂದರೆ:—ಈ ಉಪನಿಷತ್ತಿನಲ್ಲಿ ಶಿಷ್ಯನ ಕರ್ತವ್ಯ, ಗುರುವಿನ ಕರ್ತವ್ಯ, ವೇದಾಧ್ಯಯನ ವಿದ್ಯೆಯ ಪ್ರಾರಂಭದಿಂದ ಬ್ರಹ್ಮಚರ್ಯಗೃಹಸ್ಥಾಶ್ರಮಗಳ ಧರ್ಮ ಮತ್ತು ಕರ್ಮಮಾರ್ಗಗಳಲ್ಲಿನ ಸಾರಗಳು ಮತ್ತು ಧರ್ಮಮಾರ್ಗದ ನಡೆವಳಿಕೆಗಳು, ಈಶ್ವರಾನುಗ್ರಹವನ್ನು ಸಂಪಾದಿಸಬೇಕೆಂಬ ವಿಚಾರ, ನಿತ್ಯಸಿದ್ಧವಾಗಿರುವ ಪರಬ್ರಹ್ಮತ್ವವನ್ನು ಪಡೆಯುವ ಜ್ಞಾನ, ಈ ಜ್ಞಾನಕ್ಕೆ ಸಹಾಯಕವಾಗಿರುವ ವೈರಾಗ್ಯ, ಯೋಗ ಮುಂತಾದ ಸಕಲ ಸಾಧನೆಯ ತತ್ವಗಳೂ ಈ ಉಪನಿಷತ್ತಿನ ಶಿಕ್ಷಾವಲ್ಲಿಯಲ್ಲೇ ಅಡಗಿರುವುದರಿಂದ ಎಲ್ಲಾ ಉಪನಿಷತ್ತುಗಳಿಗಿಂತಲೂ ಈ ಉಪನಿಷತ್ತು ಶ್ರೇಷ್ಠವೆಂದು ಹೇಳಬಹುದು.

ಅಲ್ಲದೆ ಇತರ ಎಲ್ಲಾ ಉಪನಿಷತ್ತುಗಳೂ ಶ್ಲೋಕರೂಪದಲ್ಲಿರುತ್ತವೆ. ಈ ತೈತ್ತಿರೀಯೋಪನಿಷತ್ ಮಾತ್ರ ಸ್ವರದೊಡಗೂಡಿ ವೇದಮಂತ್ರದಂತೆ ಇರುವುದು. ಈ ಉಪನಿಷತ್ತಿನ ಮಂತ್ರಾರ್ಥಜ್ಞಾನವಿಲ್ಲದಿದ್ದರೂ ಈ ಉಪನಿಷತ್ತನ್ನು ಸ್ವರಸಹಿತ ವಾಗಿ ಪಠಿಸುವಿಕೆಯು ಮತ್ತು ಪಠಿಸುವಿಕೆಯ ಶ್ರವಣವು ಆನಂದದಾಯಕವಾಗಿ ಹಿತವಾಗಿರುವುದು. ಈ ಉಪನಿಷತ್ತಿನ ಅರ್ಥವನ್ನು ಚೆನ್ನಾಗಿ ತಿಳಿದುಕೊಂಡು ಮನನ ಮಾಡಿ ದೃಢಪಡಿಸಿಕೊಂಡು ಉಪನಿಷತ್ತನ್ನು ಸ್ವರಸಹಿತ ನಿಧಾನವಾಗಿ ಪಠಿಸುತ್ತಾ ಆ ನಾದದಲ್ಲೇ ಮಂತ್ರದಲ್ಲಿನ ತತ್ವಾರ್ಥವನ್ನು ಅನುಸಂಧಾನಮಾಡುತ್ತಾ ಪಠಣದಲ್ಲಿ ಉದ್ಭವಿಸುವ ಆನಂದದಾಯಕವಾಗಿರುವ ನಾದವನ್ನು ಅನುಸರಿಸಿಕೊಂಡು ಆನಂದ ರೂಪವಾದ ಪರಬ್ರಹ್ಮವನ್ನು ಉಪಾಸನೆಮಾಡಲು ಈ ಉಪನಿಷತ್ತಿನಲ್ಲಿ ಸೌಕರ್ಯವಿರು ವುದರಿಂದ ಇತರ ಎಲ್ಲಾ ಉಪನಿಷತ್ತುಗಳಿಗಿಂತಲೂ ಈ ಉಪನಿಷತ್ತು ಶ್ರೇಷ್ಠವಾದು ದೆಂದು ಧಾರಾಳವಾಗಿ ಹೇಳಬಹುದು.

## ಶಾಂತಿಪಾಠ

**ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ । ಶಂ ನ ಇನ್ದ್ರೋ ಬೃಹಸ್ಪತಿಃ । ಶಂ ನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಾಮೇವ ಪ್ರತ್ಯಕ್ಷಂ ಬ್ರಹ್ಮಾವಾದಿಷಮ್ । ಋತ ಮವಾದಿಷಮ್ । ಸತ್ಯಮವಾದಿಷಮ್ । ತನ್ಮಾಮಾವೀತ್ । ಆವೀನ್ಮಾಮ್ । ಆವೀದ್ವಕ್ತಾರಮ್ । ಓಂ ಶಾನ್ತಿಃ ಶಾನ್ತಿಃ ಶಾನ್ತಿಃ ॥**

ನಮಗೆ ಮಿತ್ರನು ಸುಖವನ್ನುಂಟುಮಾಡಲಿ. ವರುಣನು ನಮಗೆ ಸುಖದಾಯಕನಾಗಲಿ. ಅರ್ಯಮನು ನಮಗೆ ಸುಖಪ್ರದನಾಗಲಿ. ಇಂದ್ರನೂ ಬೃಹಸ್ಪತಿಯೂ ನಮಗೆ ಸುಖದಾಯಕರಾಗಲಿ. ವಿಷ್ಣುವು ನಮಗೆ ಸುಖಕಾರಕನಾಗಲಿ. ಬ್ರಹ್ಮಕ್ಕೆ ನಮಸ್ಕಾರ. ವಾಯುವಿಗೆ ನಮಸ್ಕಾರ. ಎಲೈ ವಾಯುವೆ ! ನೀನೇ ಪ್ರತ್ಯಕ್ಷಬ್ರಹ್ಮವಾಗಿರುವೆ. ನೀನೇ ಪ್ರತ್ಯಕ್ಷ ಬ್ರಹ್ಮವೆಂದೆನು, ಋತುವೆಂದನು, ಸತ್ಯವೆಂದೆನು. ಅದು ನನ್ನನ್ನು ಕಾಪಾಡಿತು. ಅದು ಉಪದೇಶಿಸಿದ ಆಚಾರ್ಯನನ್ನೂ ಕಾಪಾಡಿತು. ನನ್ನನ್ನೂ ಕಾಪಾಡಿತು. ಉಪದೇಶಿಸಿದ ಆಚಾರ್ಯನನ್ನೂ ಕಾಪಾಡಿತು.

ಓಂಶಾನ್ತಿಃ ಓಂಶಾನ್ತಿಃ ಓಂಶಾನ್ತಿಃ

ಓಂ ತತ್ಸತ್

---

## ಈ ಗ್ರಂಥಕರ್ತರಿಂದ ರಚಿತವಾದ ಗ್ರಂಥಗಳು

೧. ಶ್ರೀಮದ್ರಾಮಾಯಣದ ಅಂತರಾರ್ಥ ಅಥವಾ ಮೋಕ್ಷಮಾರ್ಗ ಪ್ರದೀಪಿಕೆ,

೨. ಸಂಧ್ಯಾವಂದನೆಯ ತತ್ವಾರ್ಥ.

೩. ಶ್ರೀ ಸರಸ್ವತೀಮಹಿಮೆ. (ವೀಣಾರಹಸ್ಯ)

೪. ಶ್ರೀ ಲಲಿತಾಸಹಸ್ರನಾಮ ಭಾಷ್ಯ.

೫. ಶ್ರೀ ಲಲಿತಾ ಶ್ರೀಗೌರೀಮಂತ್ರಗಳ ರಹಸ್ಯಾರ್ಥ.

೬. ಭಕ್ತಿಸುಧಾರಸ.

೭. ಮೂಲವಿದ್ಯಾಸಮರ್ಥನಾ.

೮. ರಾಜಯೋಗ.

೯. ಭಾರತ ಭಾಗವತಗಳ ಅಂತರಾರ್ಥ (ಮೋಕ್ಷಮಾರ್ಗಪ್ರದೀಪಿಕೆ) ಮತ್ತು ಭಗವದ್ಗೀತೆಯ ಮುಖ್ಯತತ್ವಗಳು.

೧೦. ತೈತ್ತಿರೀಯೋಪನಿಷದ್ರಹಸ್ಯ.

೧೧. ಜ್ಯೋತಿಷಶಾಸ್ತ್ರ ವಿಚಾರ.

೧೨. ಪರಮಾತ್ಮಭಾವನೆ.